ಉಪನ್ಯಾಸ ಗ್ರಂಥಮಾಲೆ

೨೬೭

# ರಾಯಚೂರ ಜಿಲ್ಲೆಯ ಆರ್ಥಿಕಾಭಿವೃದ್ಧಿಯಲ್ಲಿ ತುಂಗಭದ್ರಾ ಯೋಜನೆಯ ಪಾತ್ರ

ಕೆ. ಮಾರ್ಕಂಡಪ್ಪ



ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಜುಲೈ, ೧೯೭೭

ಉಪನ್ಯಾಸ ಗ್ರಂಥಮಾಲೆ
೨೬೭

# ರಾಯಚೂರು ಜಿಲ್ಲೆಯ ಆರ್ಥಿಕಾಭಿವೃದ್ಧಿಯಲ್ಲಿ ತುಂಗಭದ್ರಾ ಯೋಜನೆಯ ಪಾತ್ರ

ಕೆ. ಮಾರ್ಕಂಡಪ್ಪ




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಜುಲೈ, ೧೯೭೭

ಪ್ರಕಾಶಕರು :
ಸಿ. ಎಸ್. ಕಣವಿ
ನಿರ್ದೇಶಕರು,
ವ್ಯಾಸಂಗವಿಸ್ತರಣ–ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ: ೫೦೦೦ ಪ್ರತಿಗಳು
ಜುಲೈ, ೧೯೭೭

© ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಬೆಲೆ: ೨೫ ಪೈಸೆ

ಮುದ್ರಕರು :
ಜಿ. ಬಿ. ಮನ್ವಾಚಾರ,
ಸಹಾಯಕ ನಿರ್ದೇಶಕರು,
ಕರ್ನಾಟಕ ವಿಶ್ವವಿದ್ಯಾಲಯ, ಮುದ್ರಣಾಲಯ
ಧಾರವಾಡ–೫೮೦ ೦೦೩

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗ ವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈ-ಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ ಜನ ಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವ-ವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನ ಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನ ಭಾಂಡಾರದ ಅಲ್ಪಾಂಶವನ್ನಾದರೂ ಮಹಾ ಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸ ಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರೆವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೨೬೬ ಪುಸ್ತಕಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಆರ್. ಸಿ. ಹಿರೇಮಠ
ಕುಲಪತಿಗಳು

# ಪ್ರಸ್ತಾವನೆ

ಕರ್ನಾಟಕ ವಿಶ್ವವಿದ್ಯಾಲಯದ "ವ್ಯಾಸಂಗ ವಿಸ್ತರಣ ಶಾಖೆಯು" ೨೧೦ ನೆಯ ಉಪನ್ಯಾಸ ಶಿಬಿರದಲ್ಲಿ ನಾನು ಮಾಡಿದ ಭಾಷಣದ ವಿಸ್ತೃತ ರೂಪವೇ ಈ ಚಿಕ್ಕಹೊತ್ತಿಗೆ. ಈ ಶಿಬಿರವು ೩೧-೯-೧೯೭೫ ರಂದು 'ಗಬ್ಬೂರ'ಲ್ಲಿ ಜರುಗಿತು. "ರಾಯಚೂರು ಜಿಲ್ಲೆಯ ಆರ್ಥಿಕಾಭಿವೃದ್ಧಿಯಲ್ಲಿ ತುಂಗಭದ್ರಾ ಯೋಜನೆಯ ಪಾತ್ರ" ಎಂಬುದು ಉಪನ್ಯಾಸದ ವಿಷಯವಾಗಿತ್ತು.

ವಿಶ್ವವಿದ್ಯಾಲಯದ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ವಿಭಾಗದ ನಿರ್ದೇಶಕರು ಅರ್ಥಶಾಸ್ತ್ರದ ಯಾವುದಾದರೊಂದು ವಿಷಯದ ಬಗ್ಗೆ ಉಪನ್ಯಾಸ ಮಾಡಿರಿ ಎಂದಾಗ, ಜಿಲ್ಲೆಯ ಜನತೆಯ ತಿಳಿವಳಿಕೆಯನ್ನು ಹೆಚ್ಚಿಸಲು ಈ ವಿಷಯ ಆರಿಸಿಕೊಂಡೆ. ಇತಿಹಾಸ ಪ್ರಸಿದ್ಧ ಗಬ್ಬೂರಲ್ಲಿ ಜಿಲ್ಲೆಯ ಆರ್ಥಿಕ ಇತಿಹಾಸವನ್ನು ಮಾರ್ಪಡಿಸಿದ ನೀರಾವರಿ ಯೋಜನೆಯ ಬಗ್ಗೆ ಉಪನ್ಯಾಸ ಗೈಯುವ ಸುಯೋಗ ಬಂದೊದಗಿತು. ಜಿಲ್ಲೆಯ ಜನರಿಗೆ ಅವರದೇ ಆದ ಬೃಹತ್ ನೀರಾವರಿ ಯೋಜನೆಯ ಬಗ್ಗೆ ತಿಳಿಸುವಲ್ಲಿ ನನಗೆ ಸಂತೋಷ ಉಂಟಾಯಿತು.

ಈ ನನ್ನ ಉಪನ್ಯಾಸವನ್ನು ಸಣ್ಣ ಹೊತ್ತಿಗೆಯ ರೂಪದಲ್ಲಿ ಪ್ರಕಟವಾಗುವಂತೆ ಮಾಡಿದ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ಹಾಗು ವ್ಯಾಸಂಗವಿಸ್ತರಣ ಶಾಖೆಯ ನಿರ್ದೇ

ಶಕರಾದ ಶ್ರೀ ಸಿ. ಎಸ್. ಕಣವಿಯವರಿಗೆ ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ. ತಮ್ಮ ಸಹೃದಯತೆಯಿಂದ ಶಿಬಿರದಲ್ಲಿ ಉತ್ತಮ ಪರಿಸರವನ್ನುಂಟುಮಾಡಿ ನನಗೆ ಪ್ರೋತ್ಸಾಹ ನೀಡಿದ ವ್ಯಾಸಂಗವಿಸ್ತರಣ ಹಾಗೂ ಪ್ರಕಟನವಿಭಾಗದ ಸಹಾಯಕ ನಿರ್ದೇಶಕ ಶ್ರೀ ಎಲ್. ಎಮ್. ಗುಡ್ಡೀನ ಅವರನ್ನು ನೆನೆಯದೆ ಇರಲಾರೆ. ಉಪನ್ಯಾಸದ ಬರೆಹದಲ್ಲಿ ಸೂಕ್ತ ಸಲಹೆಯನ್ನು ನೀಡಿದ ರಾಯಚೂರಿನ ಎಲ್. ವ್ಹಿ. ಡಿ. ಕಲೆ ಹಾಗೂ ವಿಜ್ಞಾನದ ಕಾಲೇಜಿನ ಪ್ರಾಚಾರ್ಯ ಬಿ. ರಾಮಾಚಾರ್ಯರಿಗೆ ಹಾಗು ರಾಯಚೂರಿನ ಟ್ಯಾಗೋರ ಮೆಮೋರಿಯಲ್ ಜ್ಯೂನಿಯರ್ ಕಾಲೇಜಿನ ಅರ್ಥಶಾಸ್ತ್ರ ಪ್ರಾಧ್ಯಾಪಕರಾದ ಬಿ. ಎನ್. ಆಲದಕಟ್ಟಿಯವರಿಗೆ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಈ ಬರೆವಣಿಗೆಯನ್ನು ತಿದ್ದಿ ಸರಿಪಡಿಸಿದ ರಾಯಚೂರಿನ ಎಲ್. ವ್ಹಿ. ಡಿ. ಕಾಲೇಜಿನ ಕನ್ನಡ ಅಧ್ಯಾಪಕ ಶ್ರೀ ಚೆನ್ನಣ್ಣ ವಾಲಿಕಾರರಿಗೂ ನಾನು ಋಣಿ.

ಬಿ. ಆರ್. ಬಿ. ಕಾಲೇಜು — ಕೆ. ಮಾರ್ಕಂಡಪ್ಪ

ರಾಯಚೂರು

೮-೭-೧೯೭೭.

# ಪರಿವಿಡಿ

# ೧. ಪೀಠಿಕೆ

"ಒಕ್ಕಲುತನದ ಪ್ರಗತಿಯ ರಹಸ್ಯ ಕೇವಲ ಭೂ ಹಿಡುವಳಿಯ ಪ್ರಮಾಣದ ಬದಲಾವಣೆ, ಕೃಷಿ ಯಂತ್ರಗಳ ಅನುಷ್ಠಾನ ಅಥವಾ ಮಾರು-ಕಟ್ಟೆ ವ್ಯವಸ್ಥೆಯಲ್ಲಿನ ದಲ್ಲಾಳಿಗಳನ್ನು ತೆಗೆದು ಹಾಕುವುದರಲ್ಲಿ ಅಡಗಿರದೆ ಬಹುವಾಗಿ ಕೃಷಿ ಕ್ಷೇತ್ರದ ವಿಸ್ತರಣೆ, ಆಧುನಿಕ ಗೊಬ್ಬರ, ಹೊಸ ಮಾದರಿಯ ಬೀಜ, ಕ್ರಿಮಿನಾಶಕ ಔಷಧ ಹಾಗು ನೀರಿನ ಪೂರೈಕೆ ಮುಂತಾದವುಗಳಲ್ಲಿ ಅಡಗಿದೆ".

—W. A. Lewis

ತುಂಗಭದ್ರಾ ಯೋಜನೆ ಒಂದು ಬೃಹತ್‌ಪ್ರಮಾಣದ ಹಾಗು ವಿವಿಧ ಉದ್ದೇಶದ ನೀರಾವರಿ ಯೋಜನೆ. ಇದು ನೀರಿನ ಪೂರೈಕೆಯಲ್ಲಿದೆ. ವಿದ್ಯುತ್ ಶಕ್ತಿಯನ್ನು ಸಹ ಒದಗಿಸಿಕೊಡುತ್ತದೆ. ಯೋಜನೆ ಮೀನುಗಾರಿಕೆ ಹಾಗು ನೌಕಾ ಯಾನಕ್ಕೂ ಅನುವು ಮಾಡಿಕೊಟ್ಟಿದೆ. ಇಂಥ ಹಾಗು ದೇಶದ ಮತ್ತಿತರ ಬೃಹತ್ ಪ್ರಮಾಣದ ಮತ್ತು ವಿವಿಧ ಉದ್ದೇಶದ ನೀರಾವರಿ ಯೋಜನೆಗಳ ಮಹತ್ವವನ್ನು ಸಂಪೂರ್ಣ ಮನಗಂಡು ದಿವಂಗತ ಪ್ರಧಾನಿ ಪಂಡಿತ ಜವಾಹರಲಾಲ ನೆಹರೂರವರು ಅವುಗಳಿಗೆ "ಆಧುನಿಕ ಭಾರತದ ದೇವಾಲಯಗಳು" ಎಂದು ಕರೆದಿರುತ್ತಾರೆ. ಎಂಥ

ಸಾರ್ಥಕ ಹೆಸರಿದು! ಅಂಥಾ ದೇವಾಲಯುಗಳಲ್ಲಿ ಒಂದಾದ ತುಂಗಭದ್ರಾ ಯೋಜನೆಯು ಜಿಲ್ಲೆಯ ಆರ್ಥಿಕಾಭಿವೃದ್ಧಿಯಲ್ಲಿ ವಹಿಸಿದ ಹಾಗು ಇಂದಿಗೂ ವಹಿಸುತ್ತಿರುವ ಪಾತ್ರದ ಬಗೆಗೆ ಈ ಕೆಳಗೆ ಕೂಲಂಕಶವಾಗಿ ವಿವರಿಸಲಾಗಿದೆ. ಕೊನೆಯಲ್ಲಿ 'ಯೋಜನೆ' ತಂದೊಡ್ಡಿದ ಸಮಸ್ಯೆ ಹಾಗು ಅವುಗಳ ನಿವಾರಣೆಯು ಬಗೆಗೂ ಒಂದೆರಡು ಮಾತನ್ನು ಹೇಳಲಾಗಿರುತ್ತದೆ.

## ೨. ಹಿನ್ನೆಲೆ

'ಯೋಜನೆ'ಯು ಮಹತ್ವವನ್ನು ಸಂಪೂರ್ಣವಾಗಿ ಅರಿಯಲು ಅದರ ಹಿಂದಿರುವ ಅಂದಿನ ಜಿಲ್ಲೆಯ ಬರಗಾಲದ ಕರಾಳ ಹಾಗು ಭೀಕರ ಹಿನ್ನೆಲೆಯನ್ನು ತಿಳಿಯುವುದು ಅವಶ್ಯಕ ಹಾಗು ಸಮಂಜಸ. 'ಯೋಜನೆ'ಯು ಅನುಷ್ಠಾನದ ಪೂರ್ವದಲ್ಲಿ ರಾಯಚೂರ ಜಿಲ್ಲೆ ಬರಗಾಲ, ಕ್ಷಾಮ-ಡಾಮರ ಮತ್ತು ಮಹಾಪುರಗಳಿಗೆ ಹೆಸರುವಾಸಿಯಾಗಿತ್ತು. ಮೊದಲಿನಿಂದಲೂ ಜಿಲ್ಲೆ ಕಡಿಮೆ ಪ್ರಮಾಣದ ಮಳೆಗೆ ಪ್ರಸಿದ್ಧವಾದದ್ದು; ಇದು ಸಾಲದೆನೆಂಬಂತೆ ಆ ಕಡಿಮೆ ಪ್ರಮಾಣದ ಮಳೆ ಸಹ ತುಂಬಿ ಅನಿಶ್ಚಿತತೆಯಿಂದ ಕೂಡಿರುತ್ತಿತ್ತು. ಪರಿಣಾಮವಾಗಿ, ೧೪ ನೆಯ ಶತಮಾನದಿಂದಲೂ ಜಿಲ್ಲೆಯಲ್ಲಿ ಬರಗಾಲ ಪದೇ ಪದೇ ಬಂದು ಹೋಗುವ

ಅನಾದರದ ಅತಿಥಿಯಾಗಿತ್ತು. ದೊರೆತಿರುವ ಅಂಕಿ-ಸಂಖ್ಯೆಗಳು ಇದನ್ನೆ ಪುಷ್ಟಿಗೊಳಿಸುತ್ತಿವೆಯಲ್ಲದೆ ಬರಗಾಲಗಳ ಭೀಕರತೆಯನ್ನು ಸಾರಿ ಸಾರಿ ಹೇಳುತ್ತಿವೆ. "ಮನುಷ್ಯನನ್ನು ಗಿಡದ ಎಲೆಗಾಗಿ ಸಹ ಕೊಂದುಕೊಳ್ಳುವವರಿರಲಿಲ್ಲ. ಬಹು ಕಾಲದ ವರೆಗೆ ನಾಯಿ ಮಾಂಸವನ್ನು ಆಡಿನ ಮಾಂಸವೆಂದು ಮಾರುವುದಲ್ಲದೆ ಅದರ ಎಲುಬುಗಳನ್ನು ತಿನ್ನುವ ಹಿಟ್ಟಿನಲ್ಲಿ ಕಲಿಸಿ ಮಾರಾಟ ಮಾಡಲಾಗುತ್ತಿತ್ತು. ಜನ ತಮ್ಮ ಪತ್ನಿ ಹಾಗು ಮಕ್ಕಳನ್ನು ತ್ಯಜಿಸಿ ಹೊಟ್ಟೆ ಪಾಡಿಗಾಗಿ ಬೇರೆಡೆ ಹೋಗುವ ದೃಶ್ಯ ಮನೆಮಾತಾಗಿತ್ತು. ಸ್ತ್ರೀಯರು ಗುಲಾಮರಂತೆ ತಮ್ಮನ್ನು ತಾವೇ ವಿಕ್ರಯಿಸಿಕೊಳ್ಳುತ್ತಿದ್ದರು. ತಾಯಂದಿರು ತಮ್ಮ ಮಕ್ಕಳನ್ನು ಯಾವ ಮನೋವಿಕಾರಕ್ಕೆ ಒಳಗಾಗದೆ ಮಾರಿಕೊಳ್ಳುತ್ತಿದ್ದರು. ವಿಷ ತೆಗೆದುಕೊಂಡು ಸಾಯುವುದು ಸಮಾಜದ ಹಲವಾರು ಕುಟುಂಬಗಳಲ್ಲಿ ಮಾಮೂಲಾದ ವಿಷಯವಾಗಿತ್ತು. ಉಳಿದ ಕುಟುಂಬದ ಜನರು ನದಿಯಲ್ಲಿ ಹಾರಿ ತಮ್ಮ ಪ್ರಾಣ ತ್ಯಜಿಸುತ್ತಿದ್ದರು. ದಾರಿದ್ರ್ಯ ಜನರಿಗೆ ತಮ್ಮನ್ನು ತಾವೇ ತಿಂದುಹಾಕುವಂತೆ ಮಾಡಿದ್ದಿತು. ತಂದೆಗೆ ಮಗನ ಪ್ರೀತಿಗಿಂತ ಅವನ ಮಾಂಸವೇ ಆಪ್ಯಾಯಮಾನವಾಗಿತ್ತು. ಮತ್ತೊಬ್ಬ ತನ್ನನ್ನು ಓಣಿ ಹಾಗು ರಸ್ತೆಗಳಲ್ಲಿ ಯಾವಾಗ ಕೊಂದು ತಿನ್ನುತ್ತಾನೋ ಎಂಬ ಭೀತಿ ಜನರಲ್ಲಿ ಇರುತ್ತಿತ್ತು." ಎಂದು ಅಂದಿನ ಬರಗಾಲದ ದಾರುಣ ಪರಿಸ್ಥಿತಿಯನ್ನು ೧೬೩೦ ರಲ್ಲಿ "ಶ್ರೀ ಅಬ್ದುಲ್ ಹಮೀದ"ರು ತಮ್ಮ "ಬಾದಶಹನಾಮಾ,"ದಲ್ಲಿ ಬಹು ಪರಿಣಾಮಕಾರಿಯಾದ ಶೈಲಿಯಲ್ಲಿ ವಿವರಿಸಿರುತ್ತಾರೆ."

ಪದೇ ಪದೇ ಬಂದು ಹೋಗುವ ಬರಗಾಲಗಳು ಸುಮಾರು ಆರು ಶತಮಾನಗಳ ವರೆಗೆ ಜನಜೀವನದ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದ್ದವು. ಅವುಗಳ ಭೀಕರ ಪರಿಣಾಮಗಳಿಂದಾಗಿ ಜನ ತತ್ತರಿಸಿ ಹೋಗಿದ್ದರು. ಅವುಗಳ ಭೀಕರತೆಯನ್ನು ತಾಳಲಾರದೆ ಎಷ್ಟೋ ಜನ ಮುಂಬಯಿ ಪ್ರಾಂತದ ಪ್ರದೇಶಗಳಿಗೆ ವಲಸೆ ಹೋದರು. ಕುಡಿಯುವ ನೀರಿನ ಕೊರತೆಯಿಂದಲೂ ಬಹಳ ಜನ ಕಂಗಾಲಾಗಿ ಪ್ರಾಣತೆತ್ತರು. ಇದರಿಂದಾಗಿ ಜಿಲ್ಲೆಯಲ್ಲಿ ಜನವಸತಿ ಕಡಿಮೆಯಾಗುತ್ತಾ ಹೋಯಿತು.

“ಬರಗಾಲ” ಸಾಲದೇನೋ ಎಂಬಂತೆ ಇಲಿಗಳು ಹಾಗು ಇತರ ಕ್ರಿಮಿಕೀಟಗಳು ಬೆಳೆಗಳನ್ನು ನಾಶಮಾಡಿ ಜನರ ಜೀವನೋಪಾಯಕ್ಕೆ ಇನ್ನು ಹೆಚ್ಚಿನ ಗಂಡಾಂತರವನ್ನು ತರುತ್ತಿದ್ದವು.

“ತುಂಗಭದ್ರೆ”ಯು ಸಹ ಆಗಾಗ್ಗ ತನ್ನ ಮಹಾಪುರಗಳಿಂದ ರೈತರ ಬೆಳೆಗಳನ್ನು ನಾಶಮಾಡಿ ಅವರನ್ನು ಹೆಚ್ಚಿನ ಸಂಕಟಕ್ಕೆ ಈಡುಮಾಡುತ್ತಿದ್ದಳು. ಬೆಳೆಗಳನ್ನು ನಾಶಮಾಡುವಲ್ಲಿ ಅಣೆಕಲ್ಲಿನ ಮಳೆ, ಬರಗಾಲ, ಕ್ರಿಮಿಕೀಟಕ ಹಾಗು ಮಹಾಪುರಗಳಿಗೆ ಸಹಾಯವಾಗುತ್ತಿತ್ತು.

ಒಟ್ಟಿನಲ್ಲಿ ಜಿಲ್ಲೆ ಬರಗಾಲಕ್ಕೆ ಕುಪ್ರಸಿದ್ಧವಾಗಿತ್ತು. ೧೪ನೆಯ ಶತಮಾನದಿಂದ ಹೆಚ್ಚು ಕಡಿಮೆ ಸತತವಾಗಿ ಬರಗಾಲದ ಹಾವಳಿ ಕಂಡುಬಂದರೂ ೧೮೦೦ನೆಯ ಇಸ್ವಿಯಿಂದಿತ್ತ ಅದರ ಹಾವಳಿ ಹಾಗು ತೀಕ್ಷಣೆ ಹೆಚ್ಚುತ್ತಾ

ಹೋಯಿತು. ಜನ-ಜೀವನದಲ್ಲಿ ಜೀವನ್ಮೃತ ಸ್ಥಿತಿ ಕಾಣಿಸಿ ಕೊಂಡಿತು. ಈ ಅವಧಿಯಲ್ಲಿ ೨೦ ವರ್ಷಗಳಿಗಿಂತಲೂ ಹೆಚ್ಚಿನ ಅವಧಿಯ ಬರಗಾಲದ ಬವಣೆಯು ಪಾಡು ಜನತೆಯ ಪಾಲಿಗೆ ಬಂದೊದಗಿತು. ಅಂಥ ಭೀಕರ ಬರಗಾಲ, ಕ್ಷಾಮ ಡಾಮರ ಹಾಗು ಮಹಾಪುರಗಳ ಗಂಬೀರ ಹಿನ್ನೆಲೆಯಲ್ಲಿ ಹೈದ್ರಾಬಾದ, ಮದ್ರಾಸ ಮತ್ತು ಮೈಸೂರ ರಾಜ್ಯಗಳ ರಾಜನೀತಿಜ್ಞರುಗಳ ಮನಸ್ಸಿನಲ್ಲಿ ಮುಂಧೋರಣೆಯಾಗಿ "ತುಂಗಭದ್ರಾ ಯೋಜನೆ" ಮೂಡಿ ಬಂದಿತು. ದಕ್ಷಿಣ ಪ್ರಾಂತದ ನೀರಾವರಿ ಮಾಂತ್ರಿಕ" (Irrigation wizard of the south) ಎಂದು ಹೆಸರುವಾಸಿಯಾದ "Sir Arthur Cotton" ರವರು ಈ ಯೋಜನೆಯನ್ನು ಸಾಕಾರ ಗೊಳಿಸಿದರು.

ಇಂದು 'ಯೋಜನೆ' ಜಿಲ್ಲೆಯ ಆಶಾಕಿರಣವಾಗಿರುತ್ತದೆ. ಅಷ್ಟೇ ಅಲ್ಲ- ಈ ಪ್ರದೇಶದ ಆರ್ಥಿಕ ವ್ಯವಸ್ಥೆ ಹಾಗು ಅದರ ಸರ್ವಾಂಗೀಣ ಪ್ರಗತಿಯ ಜೀವನಾಡಿಯಾಗಿರುತ್ತದೆ. ಅದು ಒಕ್ಕಲುತನದ ಕ್ರಾಂತಿಗೆ ನಾಂದಿ ಹಾಡಿರುತ್ತದೆ. ಉದ್ದಿಮೆ ಮತ್ತು ಸಾರಿಗೆ ಸಂಪರ್ಕಗಳ ಬೆಳವಣಿಗೆಗೂ ಪ್ರೋತ್ಸಾಹ ನೀಡಿರುತ್ತದೆ. ಭವಿಷ್ಯದಲ್ಲಿ ಜಿಲ್ಲೆಯ ಆರ್ಥಿಕ ನಕಾಶೆಯನ್ನು ಸಾಕಷ್ಟು ಬದಲಾಯಿಸಿ ಅದನ್ನು ಪಂಜಾಬದ "ಲುಧಿಯಾನಾ" ಹಾಗು ತಮಿಳುನಾಡಿನ "ತಂಜೋರ" ದಂತೆ ಇಡೀ ರಾಜ್ಯದ ಆಹಾರ ಕಣಜವನ್ನಾಗಿ ಮಾಡಲಿದೆ.

# ೩. ಯೋಜನೆಯ ಪಕ್ಷಿನೋಟ

ವಿಜಯ ನಗರದ ಸಾಮ್ರಾಜ್ಯದ ಅವಶೇಷಗಳಿರುವ ಹಂಪೆಗೆ ಉತ್ತರಕ್ಕೆ ಸುಮಾರು ೧೮ ಕಿಲೋಮೀಟರುಗಳ ದೂರದ ಪ್ರಕೃತಿ ಸುಂದರ ಕಣಿವೆ ಪ್ರದೇಶದಲ್ಲಿ ತಂಗಭದ್ರಾ ನದಿಗೆ ಆಣೆಕಟ್ಟನ್ನು ಕಟ್ಟಿದ್ದಾರೆ. ೧೯೪೫ನೇ ಇಸ್ವಿಯ ಫೆಬ್ರುವರಿ ತಿಂಗಳಲ್ಲಿ ಪ್ರಾರಂಭವಾದ ಆಣೆಕಟ್ಟಿನ ಕಟ್ಟಡದ ಕಾರ್ಯ ೧೯೫೩ರಲ್ಲಿ ಮುಗಿಸಲಾಗಿದೆ. 'ಯೋಜನೆ'ಗೆ ೧೦೮ ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಿರಲಾಗುತ್ತದೆ. 'ಯೋಜನೆ'ಯ ನೀರಾವರಿ ಸಾಮರ್ಥ್ಯ ೪.೩೮ಲಕ್ಷ ಹೆಕ್ಟೇರು ಗಳಾಗಿದೆ.

'ಯೋಜನೆ' ೨೨೭ ಕಿ. ಮಿ. ಉದ್ದವಿರುವ ಎಡದಂಡೆ ಕಾಲುವೆ (Left Bank Canal), ೩೪೯ ಕಿ. ಮಿ, ಉದ್ದ ವಿರುವ ಬಲದಂಡೆಯ ಕೆಳಮಟ್ಟದ ಕಾಲುವೆ (Right Bank Low Level Canal) ಹಾಗೂ ೧೯೬ ಕಿ. ಮಿ; ಉದ್ದ ವಿರುವ ಬಲದಂಡೆ ಮೇಲ್ಮಟ್ಟದ ಕಾಲುವೆ (Right Bank High Level Canal) ಎಂಬ ಮೂರು ಕಾಲುವೆಗನ್ನು ಹೊಂದಿವೆ. ಬಲದಂಡೆಯ ಕೆಳಮಟ್ಟ ಹಾಗೂ ಮೇಲ್ಮಟ್ಟದ ಕಾಲುವೆಗಳು ಕರ್ನಾಟಕದ ಬಳ್ಳಾರಿ ಮತ್ತು ಆಂಧ್ರ ಪ್ರದೇಶದ ಕಡಪಾ ಕರ್ನೂಲು ಅನಂತಪುರ ಮುಂತಾದ ಜಿಲ್ಲೆಗಳಿಗೆ ನೀರಾವರಿ ಸೌಲಭ್ಯವನ್ನು ಒದಗಿಸುತ್ತಿವೆ. ಎಡದಂಡೆಯ ಕಾಲುವೆ ಈ ಜಿಲ್ಲೆಯ ಆರು

ತಾಲೂಕುಗಳಿಗೆ ನಿರೊದಗಿಸುತ್ತಿದೆ. ಅಣೆಕಟ್ಟಿನ ಎಡ ಹಾಗೂ ಬಲ ಭಾಗಗಳಲ್ಲಿ ಎರಡು ವಿದ್ಯುತ್ ಕಾರ್ಯಾಗಾರಗಳು ಇರುತ್ತವೆ ಹಾಗು ಅವುಗಳ ವಿದ್ಯುತ್ ಉತ್ಪಾದನೆಯ ಸಾಮರ್ಥ್ಯ ೯೯ ಎಂ ಡಬ್ಲ್ಯು ಇದೆ.

ಮೇಲಿಂದ ಮೇಲೆ ಮೊಗದೆತ್ತಿ ನಿಲ್ಲುವ ಬರಗಾಲ ಪರಿಸ್ಥಿತಿಯ ಹಿನ್ನೆಲೆಯಲ್ಲಿ ರೂಪಿತವಾದ ಯೋಜನೆ ಇದು. ಆದ್ದರಿಂದ ಬರಗಾಲದ ದಿನಗಳಲ್ಲಿ ಇಲ್ಲಿನ ಜನಜೀವನಕ್ಕೆ ಸಂರಕ್ಷಣೆ ನೀಡುವದೇ ಇದರ ಮುಖ್ಯ ಗುರಿಯಾಗಿದೆ. ಇದರಿಂದಾಗಿ, ಸ್ವಲ್ಪ ಭೂಮಿಗೆ ಅಧಿಕ ಪ್ರಮಾಣದ ನೀರಾವರಿ (Heavy Irrigation)ಸೌಕರ್ಯ ಒದಗಿಸುವುದಕ್ಕಿಂತಲೂ ಆದಷ್ಟು ಹೆಚ್ಚಿನ ಪ್ರಮಾಣದ ಭೂಮಿಗೆ ಕಡಿಮೆ ಪ್ರಮಾಣದಲ್ಲಿ ನೀರುಣಿಸಿ ಅಧಿಕ ಸಂಖ್ಯೆಯ ಜನರಿಗೆ ಆಹಾರದ ಆಧಾರವನ್ನೊದಗಿಸಿಕೊಡುವುದಕ್ಕೆ ಇಲ್ಲಿ ಹೆಚ್ಚಿನ ಪ್ರಾಶಸ್ತ್ಯವಿದೆ. ಈ 'ಯೋಜನೆ'ಯಲ್ಲಿ, ಶೇಕಡಾ ೮೦ ರಷ್ಟು ಭೂಮಿಯನ್ನು ಕಡಿಮೆ ಪ್ರಮಾಣದ ನೀರಾವರಿ (Light Irrigation)ಗಾಗಿ ಸಿದ್ಧಗೊಳಿಸಲಾಗಿದೆ ಹಾಗು ಇನ್ನುಳಿದ ಶೇಕಡಾ ೨೦ ರಷ್ಟು ಭೂಮಿಯನ್ನು ಮಾತ್ರ ಅಧಿಕ ಪ್ರಮಾಣ ನೀರಾವರಿ (Heavy Irrigation)ಗಾಗಿ ಅಣಿಗೊಳಿಸಲಾಗಿದೆಂಬುದನ್ನು ಸಹ ಗಮನಿಸಬೇಕಾಗಿದೆ.

## ೪. ಎಡದಂಡೆ ಕಾಲುವೆ (Left Bonk Canal)

ಈ ಕಾಲುವೆಯು ಜಿಲ್ಲೆಯ ೨,೪೯,೨೨೨.೬೨ ಹೆಕ್ಟೇರು ಭೂಮಿಗೆ ನೀರುಣಿಸುವ ಸಾಮರ್ಥ್ಯವನ್ನು ಹೊಂದಿದೆ. ಪ್ರಾರಂಭದಲ್ಲಿ ಈ ಕಾಲುವೆ ೪೦ ಕಿ. ಮಿ. ಗಳವರೆಗೆ ಗುಡ್ಡಗಾಡು ಪ್ರದೇಶದಲ್ಲಿ ಸಾಗುತ್ತದೆ. ಈ ಪ್ರದೇಶದಲ್ಲಿಯೇ ಸುಪ್ರಸಿದ್ಧ "ಪಾಪಯ್ಯ ಸುರಂಗ ಮಾರ್ಗ" (Papayya Tunnel) ಇದೆ. ಇದನ್ನು ಗುಡ್ಡದಲ್ಲಿ ಕೊರೆದು ನಿರ್ಮಿಸಲಾಗಿದೆ. ಈ ಮುಖ್ಯ ಕಾಲುವೆ ಕೆಲವು "ಕೃತಕ ಕಾಲುವೆ" (artificial canals)ಗಳನ್ನು ಹೊಂದಿದೆ. ಅತ್ಯಂತ ಹಿರಿದಾದ ಕೃತಕ ಕಾಲುವೆ ಮಸ್ಕಿಹಳ್ಳದ ೪೦ ಕಿ. ಮಿ. ನಂಬರಿನಲ್ಲಿದೆ. ಈ ಕಾಲುವೆಯು ತನ್ನ ಬೊಡ್ಡಿಯಲ್ಲಿ ೪೧೦೦ ಕ್ಯೂಸೆಕ್ಸ ಸಾಮರ್ಥ್ಯವನ್ನು ಹೊಂದಿದೆ. ಕಾಲುವೆಯ ಮೊದಲನೆಯ ೨೭ ಕಿ. ಮಿ. ವಿದ್ಯುತ್ ಶಕ್ತಿ ಉತ್ಪಾದನೆಯ ದೃಷ್ಟಿಯಿಂದ ನಿರ್ಮಿಸಲಾಗಿದೆ. ಈ ಭಾಗದ ಸಾಮರ್ಥ್ಯ ೭,೦೦೦ ಕ್ಯೂಸೆಕ್ಸ ಇವೆ. ಕಾಲುವೆಯ ೧೮ನೆಯ ಕಿ. ಮಿ. ನಲ್ಲಿ ಒಂದು ಜಲಪಾತವಿದೆ. ಅದು "ಶಿವಪುರ" ಜಲಪಾತವೆಂದು ಪ್ರಸಿದ್ಧಿಯಾಗಿದೆ. ಈ ಸ್ಥಾನ ವಿದ್ಯುತ್ ಶಕ್ತಿಯ ಉತ್ಪಾದನೆಗಾಗಿ ಪ್ರಶಸ್ತವಾಗಿದೆ.

'ಕಾಲುವೆ'ಯು ರಾಯಚೂರ ಜಿಲ್ಲೆಯ ಒಟ್ಟು ೯ ತಾಲೂಕುಗಳಲ್ಲಿನ ೬ ತಾಲೂಕಗಳಿಗೆ ನೀರನ್ನು ಒದಗಿಸುತ್ತದೆ. ಹೆಚ್ಚಿನ ವಿವರಗಳನ್ನು ಈ ಕೆಳಗಿನ ಕೋಷ್ಟಕವು ನೀಡುತ್ತದೆ.

## ಕೋಷ್ಟಕ ೧

### ರಾಯಚೂರ ಜಿಲ್ಲೆಯ (ತಾಲೂಕವಾರ) ಅಭಿವೃದ್ಧಿ ವಿವರ
### (ಸಪ್ಟಂಬರ ೧೯೭೫ರ ವರೆಗೆ)

| ತಾಲೂಕ | ನೀರಾವರಿಯಾಗ ಬೇಕಾದ ಕ್ಷೇತ್ರ (ಹೆಕ್ಟೇರುಗಳಲ್ಲಿ) | ನೀರಾವರಿಯಾದ ಕ್ಷೇತ್ರ (ಹೆಕ್ಟೇರುಗಳಲ್ಲಿ) | ಇನ್ನೂ ನೀರಾವರಿಯಾಗ ಬೇಕಾದ ಕ್ಷೇತ್ರ (ಹೆಕ್ಟೇರುಗಳಲ್ಲಿ) |
|---|---|---|---|
| ೧ ಕೊಪ್ಪಳ | ೨೦೨೧.೦೨ | ೧೯೩೮.೭೮ | ೦೦೦೮೧.೨೪ |
| ೨ ಗಂಗಾವತಿ | ೩೫,೫೨೧.೫೮ | ೨೬೧೫೧.೫೧ | ೦೬೩೭೪.೦೭ |
| ೩ ಸಿಂಧನೂರು | ೯೦೦೬೫.೩೨ | ೩೪೨೪೧.೬೫ | ೫೫,೮೨೩.೬೭ |
| ೪ ಮಾನ್ವಿ | ೮೫೧೫೫ ೯೬ | ೪೮೭೩೪.೦೦ | ೩೬,೪೨೧.೯೬ |
| ೫ ದೇವದುರ್ಗ | ೨೧೮೬.೯೪ | ೭೧೬.೦೦ | ೦೦೪೭೩.೯೪ |
| ೬ ರಾಯಚೂರು | ೨೮,೨೬೪.೮೦ | ೧೩೦೮೪.೦೦ | ೧೫,೧೮೦.೮೦ |
| ಒಟ್ಟು | ೨,೪೩,೨೧೫,೬೨ | ೧,೨೪,೮೬೫ ೯೪ | ೧,೨೪,೩೫೫.೬೮ |

Source : Deputy Director of Agriculture Raichur.

ಟಿಪ್ಪಣಿ: ನೀರಾವರಿಯಿಂದ ವ್ಯವಸಾಯ ಮಾಡಲು ಅನುಮತಿಯಿರುವ ಒಟ್ಟು ಭೂಮಿಯ ವಿಸ್ತಾರ ೨,೪೩,೨೧೫.೬೨ ಹೆಕ್ಟೇರುಗಳಲ್ಲಿ ೭೨೨೨.೬೨ ಹೆಕ್ಟೇರು

ಭೂಮಿಯು ಕಾಲುವೆ, ರಸ್ತೆ ಹಾಗು ಭೂ ದಿಬ್ಬದಲ್ಲಿ ಬರುತ್ತದೆ. ಆದ್ದರಿಂದ ಈಗ ಇನ್ನೂ ನೀರಾವರಿಯಾಗಬೇಕಾದ ಕ್ಷೇತ್ರ ೧,೦೭,೧೩೩.೦೬ ಹೆಕ್ಟೇರುಗಳಿರುತ್ತದೆ.

ಮುಂದುವರೆದು, ನೀರಾವರಿಯಾದ ಕ್ಷೇತ್ರಗಳಲ್ಲಿ ನಿರ್ಧರಿಸಲಾದ ಬೆಳೆಗಳ ಹಾಗು ಬೆಳೆಯಬೇಕಾದ ಹೆಕ್ಟೇರುಗಳ ವಿವರವನ್ನು ಈ ಮುಂದಿನ ಕೋಷ್ಟಕವು ಸೂಚಿಸುತ್ತದೆ.

## ಕೋಷ್ಟಕ ೨

### ತುಂಗಭದ್ರಾ ಎಡದಂಡೆ (ರಾಯಚೂರು ಜಿಲ್ಲೆ) ತಾಲೂಕಗಳ ಪ್ರಕಾರವಾಗಿ ಲೋಕಲೈಜಡ್ ಆದ ಭೂಮಿಯಲ್ಲಿ ನಿರ್ಧರಿಸಲಾದ ಬೆಳೆಗಳ ಹಾಗೂ ಅವುಗಳನ್ನು ಬೆಳೆಯಬೇಕಾದ ಹೆಕ್ಟೇರುಗಳ ವಿವರ

| ತಾಲೂಕು | ಭತ್ತ | ಕಬ್ಬು | ಮುಂಗಾರಿ | ಹಿಂಗಾರಿ | ಹತ್ತಿ | ಬಾಗಾಯ್ತು | ಒಟ್ಟು |
|---|---|---|---|---|---|---|---|
| ೧ ರಾಯಚೂರು | ೨೫೪೬.೧೫ | ...... | ೧೨,೭೬೮.೮೧ | ೧೩,೧೭೩.೬೧ | ..೩೨೪.೭೬ | ...... | ೨೮,೮೧೩.೩೩ |
| ೨ ಕೊಪ್ಪಳ | ...... | ೧೯೦೦.೪೦ | ೬೨.೭೫ | ......... | ....... | ೮೨.೨೧ | ೨೦೪೫.೩೬ |
| ೩ ಗಂಗಾವತಿ | ೬೭೧೪.೫೭ | ೬೩೮೫.೦೨ | ೭೧೨೭.೧೨ | ೭೧೨೭.೧೨ | ೩೦?೧.೪೭ | ೨೩೬೦.೦೯ | ೩೨,೬೩೫.೬೯ |
| ೪ ಸಿಂದನೂರು | ೩೬೬೭.೬೧ | ...... | ೩೨,೫೪೦.೪೩ | ೩೫,೫೪೬.೫೩ | ೧೫೭೨೬ ೦೮ | ೨೨೭೭.೪೪ | ೮೯,೭೬೮ ೦೯ |
| ೫ ಮಾನ್ವಿ | ೮೨೭೩.೦೬ | ...... | ೩೪,೦೫೯.೫೩ | ೩೧೫೦೬.೦೩ | ೧೧೦೪೬.೯೧ | ೧೩೧೫.೪೮ | ೮೬,೨೦೦.೦೧ |
| ೬ ದೇವದುರ್ಗ | ...... | ...... | ೫೯೬.೭೬ | ೫೯೪,೩೩ | ೧೪.೧೯ | ೧೦೩೦.೪೮ | ೨,೨೩೫.೭೬ |
| ಒಟ್ಟು | ೨೧,೨೦೦.೩೯ | ೮೨೮೫.೪೨ | ೮೭,೧೫೫.೪೦ | ೮೭,೯೪೭.೪೦ | ೩೦,೧೩೩.೪೧ | ೬,೯೬೫.೭೦ | ೨೪,೧೬೯.೯೪ |

**ಟಿಪ್ಪಣಿ :** ನೀರಾವರಿಯಿಂದ ವ್ಯವಸಾಯ ಮಾಡಲು ಅನುಮತಿ ಇರುವ ಒಟ್ಟು ಭೂಮಿಯ ವಿಸ್ತಾರ ೨,೩೯,೨೨೨.೬೨ ಹೆಕ್ಟೇರುಗಳಲ್ಲಿ ೭೨೨೨.೬೨ ಹೆಕ್ಟೇರುಗಳು ಭೂಮಿಯು ಕಾಲುವೆ ರಸ್ತೆ ಹಾಗು ಭೂ ದಿಬ್ಬದಲ್ಲಿ ಬರುತ್ತದೆ.

## ೫. 'ಯೋಜನೆ'ಯಿಂದ ಉಂಟಾದ ಕೃಷಿ ಕ್ಷೇತ್ರದ ಅಭಿವೃದ್ಧಿ

ಬೇಸಾಯ ಕ್ಷೇತ್ರವನ್ನು "ಕ್ರಾಂತಿ"ಯ ಹೊಸ್ತಿಲಲ್ಲಿ ತಂದ ಕೀರ್ತಿ 'ಯೋಜನೆ'ಗೆ ಸಲ್ಲುತ್ತದೆ. ಈ 'ಯೋಜನೆ'ಯ ಅನುಷ್ಠಾನದ ಪೂರ್ವದಲ್ಲಿ ರೈತರು ಕಡುಬಡವರಾಗಿದ್ದರು. ಅವರ ಉಳುವ ಪದ್ಧತಿ 'ಓಬಿರಾಯನ ಕಾಲದ' ಪದ್ಧತಿಯಾಗಿತ್ತು ಕೃತಕ ಗೊಬ್ಬರ, ಸುಧಾರಿತ ಬೀಜ, ಟ್ರ್ಯಾಕ್ಟರ, ಕ್ರಿಮಿನಾಶಕ ಔಷಧ ಮುಂತಾದವುಗಳು ಅವರ ಸನಿಹಕ್ಕೆ ಸಹ ಸುಳಿದಿರಲಿಲ್ಲ ಅವರಿಗೆ ವಿಸ್ತಾರವಾದ ಭೂಮಿ ಇತ್ತು ನಿಜ; ಆದರೆ ಅದು ಅಭಿವೃದ್ಧಿಯಾಗಿರಲಿಲ್ಲ. ತಮ್ಮ ಸಾಮರ್ಥ್ಯ ಮೀರಿ ಸುಧಾರಿಸಲಾಗದ ಭೂಮಿಯನ್ನು ಮಾರಿ ಬಿಡುವುದಕ್ಕೆ ಅವರಿಗೆ ಅದರ ಮೇಲಿನ ಪರಂಪರಾಗತ ಮೋಹ ಅಡ್ಡಬರುತ್ತಿತ್ತು. ಸ್ವಲ್ಪವೇ ಮಳೆ ಬೀಳುವ ಪ್ರದೇಶವಾದ ಕಾರಣ ಜಿಲ್ಲೆಯ ರೈತರೆಲ್ಲರು ಆಹಾರದ ಬೆಳೆಗಳನ್ನು ಅದರಲ್ಲೂ ಹೆಚ್ಚಾಗಿ, ಸ್ಥಾನೀಯ ವಿಧದ ಜೋಳವನ್ನೇ ಬೆಳೆಯುತ್ತಿದ್ದರು. ಯಾವ ವಿಶೇಷದ ತೊಂದರೆಯನ್ನು ತೆಗೆದುಕೊಳ್ಳುವ ಗೋಜಿಗೆ ಹೋಗದೆ, ಹೆಚ್ಚು ಹಣ ಖರ್ಚುಮಾಡದೆ ಹಾಗು "ಬೆಳೆ ವಿಧಾನ" (cropping pattern) ವನ್ನು ಸುಧಾರಿಸಿಕೊಳ್ಳುವ ಗೋಜಿಗೆ ಹೋಗದೆ ಅವರು ಭೂಮಿಯನ್ನು "ಅಡ್ಡ ಹರಿಗಿ–ಉದ್ದ ಬಿತ್ತಿ"

ಕಡಿಮೆ ಪ್ರಮಾಣದ ಉತ್ಪಾದನೆಯನ್ನು ಹೊಂದುತ್ತಿದ್ದರು. ಒಟ್ಟನಲ್ಲಿ ಜಿಲ್ಲೆಯ ಒಕ್ಕಲುತನ ಕಡಿಮೆ ಪ್ರಮಾಣದ ಉತ್ಪಾದನೆಯ "ವಿಷವೃತ್ತ" (vicious circle) ದಲ್ಲಿ ಸಿಕ್ಕಿಕೊಂಡು ತೊಳಲಾಡುತ್ತಿತ್ತು. ಕೃಷಿ ಬೆಳೆಗಳಲ್ಲಿ ಆಹಾರ ಬೆಳೆಗಳದ್ದೇ ಮೇಲುಗೈಯಾಗಿತ್ತು. ಅಂಕಿ-ಸಂಖ್ಯೆಗಳ ಮೊರೆ ಹೋದದ್ದಾದರೆ- ಆಹಾರ ಹಾಗು ಹಣಕಾಸಿನ ಬೆಳೆಗಳ ಪ್ರಮಾಣ ೯೦:೧೦ ಆಗಿತ್ತೆಂದು ಹೇಳಬಹುದು.

'ಯೋಜನೆ' ಒಕ್ಕಲುತನಕ್ಕೆ ಒಂದು ಹೊಸ ತಿರುವನ್ನು ನೀಡಿದೆ. "ಬೆಳೆ-ವಿಧಾನ"ದಲ್ಲಿ ಒಂದು ಇಡಿಯಾದ ಬದಲಾವಣೆಯನ್ನು ತಂದುಕೊಟ್ಟಿದೆ "ಸಾಂದ್ರ ಬೇಸಾಯ ಪದ್ಧತಿ"ಯನ್ನು ಜನಪ್ರಿಯ ಗೊಳಿಸಿದೆ. ಈ ವಿಷಯ ಏನೇ ಇರಲಿ, 'ಯೋಜನೆ'ಯಿಂದ ಕೃಷಿ ಕ್ಷೇತ್ರದಲ್ಲಿ ಉಂಟಾದ ಪರಿಣಾಮಕಾರಿಯಾದ ಬದಲಾವಣೆಗಳನ್ನು ಈ ಕೆಳಗಿನ ಇತ್ತೀಚಿನ ಕೆಲವು ಬೆಳವಣಿಗೆಗಳು ಹೆಚ್ಚು ಪರಿಸ್ಫುಟ ಗೊಳಿಸುತ್ತವೆ.

### (i) ಹೊಸ ಬೆಳೆ-ವಿಧಾನ (New cropping pattern) :

'ಯೋಜನೆ'ಯ ಅನುಷ್ಠಾನದಿಂದಾಗಿ ಜಿಲ್ಲೆಯ "ಬೆಳೆ-ವಿಧಾನ" ದಲ್ಲಿ ಹಲವಾರು ಬದಲಾವಣೆಗಳಾಗಿವೆ. ಇಂದು ರೈತರು ಹಣಕಾಸಿನ ಬೆಳೆ (cash-crops) ಗಳ ಕಡೆಗೆ ಹೆಚ್ಚು ಆಕರ್ಷಿತಗೊಂಡಿರುತ್ತಾರೆ.

ಕೆಳಗಿನ ಅಂಕಿ-ಸಂಖ್ಯೆಗಳು ಆಹಾರ (food) ಹಾಗು ಹಣಕಾಸಿನ (commercial or cash) ಬೆಳೆಗಳ ಪ್ರಮಾಣ

೬೧.೫:೩೮.೯೫ ಇರುತ್ತದೆಂದು ಸಾರುತ್ತಿವೆ. ಒಂದೇ ಒಂದು ದಶಕದಲ್ಲಿ ಎಂಥಾ ಮಾರ್ಪಾಡು!

### ಕೋಷ್ಟಕ ೩

ಬೆಳೆ–ಮಾದರಿ : ೧೯೭೨–೭೩

| ಕ್ರಮಾಂಕ | ಬೆಳೆಗಳು | ಬಿತ್ತಲಾದ ಕ್ಷೇತ್ರ (ಹೆಕ್ಟೇರುಗಳಲ್ಲಿ) |
|---|---|---|
| ೧ | ಭತ್ತ | ೨೪,೪೯೨ |
| ೨ | ಮುಂಗಾರು ಜೋಳ | ೧,೫೯,೦೮೯ |
| ೩ | ಹಿಂಗಾರಿ ಜೋಳ | ೨,೧೬,೪೮೮ |
| ೪ | ಸಜ್ಜೆ | ೦,೫೬,೦೪೦ |
| ೫ | ಗೋಧಿ | ೦,೨೧,೯೮೭ |
| ೬ | ಕಾಳುಗಳು | ೧,೨೨,೬೪೭ |
| ೭ | ಕಬ್ಬು | ೦,೦೭,೭೪೦ |
| ೮ | ಸೇಂಗ | ೦,೮೬,೮೨೦ |
| ೯ | ಹತ್ತಿ | ೨,೮೦,೧೪೩ |

(ಮೂಲ : ಉಪನಿರ್ದೇಶಕ ಕೃಷಿ ವಿಭಾಗ-ರಾಯಚೂರು)

## (ii) ಅಧಿಕ ಇಳುವರಿ ನೀಡುವ ಯೋಜನೆ :

## (High yielding variety programme) :

ಈ ಯೋಜನೆಯನ್ನು ೧೯.೬೫–೬೬ ರಲ್ಲಿ ಅನುಷ್ಠಾನದಲ್ಲಿ ತರಲಾಯಿತು. ಜಿಲ್ಲೆಯ ಬೇಸಾಯ ಕ್ಷೇತ್ರದ ಪ್ರಗತಿಯಲ್ಲಿ ಇದೊಂದು ಮಹತ್ವದ ಘಟನೆಯಾಗಿದೆ. ರಾಜ್ಯದ ಕೃಷಿ ವಿಶ್ವವಿದ್ಯಾಲಯದವರು ತುಂಗಭದ್ರಾ ಯೋಜನೆಯ ಕ್ಷೇತ್ರವನ್ನು ಕೂಲಂಕಷವಾಗಿ ಅಭ್ಯಸಿಸಿ ಈ ಕೆಳಗಿನ "ಬೆಳೆ–ವಿಧಾನ"ವನ್ನು ಶಿಫಾರಸು ಮಾಡಿದರು. ಇದನ್ನು ಸರಕಾರ ಅನುಷ್ಠಾನದಲ್ಲಿ ಸಹ ತಂದಿದೆ.

**ಕೃಷಿ ವಿಶ್ವವಿದ್ಯಾಲಯದ ಬೆಳೆ–ವಿಧಾನ ಮುಂಗಾರು ಬೆಳೆ :**

**A. ನೀರಾವರಿ ಪ್ರದೇಶದ (ಕಪ್ಪು ಮಣ್ಣಿನ) ಭೂಮಿಗೆ :**

೧ ಹೈಬ್ರೀಡ ಮೆಕ್ಕೆ ಜೋಳ : 'ಡೆಕ್ಕನ್' ಅಥವಾ 'ರಣಜೀತ'

೨ ಹೈಬ್ರೀಡ ಜೋಳ : CHS–1, D–340 & $C_7$–1195

೩ ಹೈಬ್ರೀಡ ಸಜ್ಜೆ : HB-1 & D–174

೪ ಸಟರಿಯಾ : K–221–1

೫ 'ಪೂರ್ಣಾ' ರಾಗಿ :

**B. ನೀರಾವರಿ ಪ್ರದೇಶದ (ಕೆಂಪು ಮಣ್ಣಿನ) ಭೂಮಿಗೆ :**

೧ ಸೇಂಗಾ ಬೆಳೆ

C ಒಣ ಬೇಸಾಯ ಹಾಗು ಎರಡನೆಯ ಬೆಳೆಗೆ :

೧ ಮೆಕ್ಸಿಕನ್ ಗೋಧಿ
೨ 'ಬೆಂಗಾಲ' ಬೇಳೆ
೩ ಕುಸುಂಬೆ ಗಿಡ (safflower)

## ಹಿಂಗಾರು ಬೆಳೆ

A. ನೀರಾವರಿ ಪ್ರದೇಶದ ಭೂಮಿಗೆ :

೧ 'ಲೋರ್ಮೊ ರೋಜೆ' ಹಾಗು 'ಸೋನಾರ-೬೪' ವಿಧದ ಮೆಕ್ಸಿಕನ್ ಗೋಧಿ
೨ 'ಡೆಕ್ಕನ್' ಹಾಗು 'ರಣಜಿತ' ವಿಧದ ಹೈಬ್ರೀಡ ಮೆಕ್ಕೆ ಜೋಳ
೩ ಕುಸುಂಬೆಗಿಡ
೪ 'ಹೈಬ್ರೀಡ' ಸಜ್ಜೆ ಅಥವಾ 'D-೧೭೪' ಸಜ್ಜೆ
೫ M-೩೫-೧ ಹಾಗು M-೪೭-೩ ಜೋಳ
೬ 'ಪೂರ್ಣಾ' ರಾಗಿ.

## ಅಲ್ಪಾವಧಿ ಬೆಳೆಗಳು

೧ ಹೈಬ್ರೀಡ ಬಾಜರಾ
೨ ಸಟರಿಯಾ
೩ 'ಪೂರ್ಣಾ' ರಾಗಿ

೪ ದ್ವಿದಳ ಧಾನ್ಯಗಳು ಹಾಗು ಸಣಬು ಅಥವಾ ಎಳ್ಳು

೫ ಹತ್ತಿ : a) ಹೈಬ್ರೀಡ-೪ b) ವರಲಕ್ಷ್ಮಿ c) ಜಯಧರ d) R-೫ ಹತ್ತಿ

### (iii) ಹೆಚ್ಚು ಇಳುವರಿ ನೀಡುವ ಬೆಳೆಗಳ ಜನಪ್ರಿಯತೆ :

**ಜೋಳ** : ಇದು ಜಿಲ್ಲೆಯ ಅತಿ ಮುಖ್ಯವಾದ ಬೆಳೆಯಾಗಿದೆ. ಇದರ ಉತ್ಪಾದನೆಯಲ್ಲಿ ಹೈಬ್ರೀಡ ಬೀಜಗಳ ಉಪಯೋಗವನ್ನು ಪಡೆಯಲಾಗಿದೆ. 'ಖಾಸಲಾ' ಎಂಬ ಸ್ಥಾನೀಯ ವಿಧದ ಬೀಜದ ಜೊತೆಗೆ D-೩೪೦, ಮಾಥುರ, ಬಸವನಪಾಡಾ, ಶಕ್ತಿಮಾನ, ಹೈಬ್ರೀಡ ಜೋಳ, ೭೧೫-ಜೋಳ. CSH-೧, CSH-೨, CSH-೪ ಹಾಗು M-೩೫-೧ ಎಂಬ ನವೀನ ಮತ್ತು ಅಧಿಕ ಇಳುವರಿ ನೀಡುವ ಬೀಜಗಳನ್ನು ಬಿತ್ತಿ ವ್ಯಾಪಕವಾಗಿ ಬೆಳೆಯಲಾಗುತ್ತಿದೆ. ೧೯೬೭ ರಲ್ಲಿ ಅವುಗಳ ಪ್ರಾತ್ಯಕ್ಷಿಕೆಗಳನ್ನು ಹಾಕಲಾಗಿತ್ತು ಹಾಗು ಪ್ರತಿ ಹೆಕ್ಟೇರಿಗೆ ೩೬ ರಿಂದ ೬೨ ಕ್ವಿಂಟಲ್ ಧಾನ್ಯ ಪಡೆಯಲಾಯಿತು. ಮುಂದುವರಿದು, ಇಂದು ಹೈಬ್ರೀಡೇತರ ಬೀಜಗಳನ್ನು ಬಿತ್ತಿ ಅವುಗಳಿಂದಲೂ ಪ್ರತಿ ಹೆಕ್ಟೇರಿಗೆ ೧೫ ರಿಂದ ೨೦ ಕ್ವಿ. ವರೆಗೆ ಇಳುವರಿ ಪಡೆಯಲಾಗುತ್ತಿದೆ. ಈ ವಿಧದ ಬೀಜಗಳನ್ನು ಅಲ್ಪ ನೀರಾವರಿಯ ಕಪ್ಪು ಭೂಮಿಯಲ್ಲಿ ಪ್ರೋತ್ಸಾಹಿಸಲಾಗಿದೆ.

**ಭತ್ತ** : ಭತ್ತದ ಬೆಳೆಯಲ್ಲೂ ಹೈಬ್ರೀಡ ಬೀಜಗಳನ್ನು ಜನಪ್ರಿಯಗೊಳಿಸಲಾಗಿದೆ. ಹೊಸ ಹಾಗು ಹೈಬ್ರೀಡ ಬೀಜ

ಗಳಾದ TN-೧, ೧R-೫, ೧R-೮, ೧R-೨೦, ೧ET-೧೯೯೧, ADT-೨೭, SR ೨೬B, HR-೧೯, HR-೩೫, ಶೆಲೆಕ್ಶನ್-೨೮, ರಾಜಹಂಸ, ಕಿಛಡಿ, ಕೃಷ್ಣ, ಜವಾ ಮತ್ತು ಸುಮ ಎಂಬ ಹಲವಾರು ಬೀಜಗಳ ಉಪಯೋಗವನ್ನು ಪಡೆಯು ಲಾಗುತ್ತಿದೆ. ಪರಿಣಾಮವಾಗಿ ಪ್ರತಿ ಹೆಕ್ಟೇರಿನ ಭತ್ತದ ಉತ್ಪಾದನೆಯಲ್ಲಿ ಗಮನಾರ್ಹ ಹೆಚ್ಚಳ ಕಂಡುಬರುತ್ತಿದೆ.

**ಸಜ್ಜೆ :** ಜಿಲ್ಲೆಯ ಪ್ರಮುಖ ಬೆಳೆಗಳಲ್ಲಿ ಇದು ಮೂರನೆಯ ದಾಗಿರುತ್ತದೆ. ಅಧಿಕ ಉತ್ಪಾದನೆ ನೀಡುವ ಹೈಬ್ರೀಡ ಬೀಜಗಳನ್ನು ಇಲ್ಲಿಯೂ ಸಹ ಅನುಷ್ಠಾನದಲ್ಲಿ ತರಲಾಗಿದೆ. ಆಯಕಟ್ಟಿನ ಪ್ರದೇಶವಾದ ಮಾನ್ವಿ (ಇದೊಂದು ರಾಯ ಚೂರ ಜಿಲ್ಲೆಯ ತಾಲೂಕ) ಯಲ್ಲಿ ಈ ಬೆಳೆಯನ್ನು ಬಹು ವ್ಯಾಪಕವಾಗಿ ಬೆಳೆಯಲಾಗಿದೆ. ಸಜ್ಜೆಯ ಹೈಬ್ರೀಡ ಬೀಜ ಗಳಾದ HB-೧, HB-೩, HB-೪, HB-೫ ಹಾಗು D-೧೭ಳ ಬೀಜಗಳು ತುಂಬಾ ಜನಪ್ರೀಯತೆಯನ್ನು ಪಡೆದಿರುತ್ತವೆ. ಅವುಗಳ ೧೯೬೭ರ ಮುಂಗಾರಿಯ ಪ್ರಾತಿಕ್ಷಿಕೆಯಲ್ಲಿ ಪ್ರತಿ ಹೆಕ್ಟೇರಿಗೆ ೨೦ ಕ್ವಿಂಟಲ್ ಧಾನ್ಯವನ್ನು ಸಹ ಪಡೆಯು ಲಾಯಿತು.

**ಗೋಧಿ :** ತುಂಗಭದ್ರಾ ಯೋಜನೆಯ ಆಯಕಟ್ಟಿನ ವ್ಯಾಪ್ತಿಯಲ್ಲಿ ಬರುವ ಗಂಗಾವತಿ ಹಾಗು ಕೊಪ್ಪಳ ತಾಲೂಕ ಗಳಲ್ಲಿ ಸುಧಾರಿತ ಮತ್ತು ಅಧಿಕ ಇಳುವರಿ ನೀಡುವ ಹೈಬ್ರೀಡ ಗೋಧಿ ಬೀಜಗಳನ್ನು ವ್ಯಾಪಕವಾಗಿ ಬಿತ್ತಲಾಗು ತ್ತಿದೆ. ಲರ್ಮಾರೋಜೋ, ಸೋನಾರ, U. P. ೩೦೧,

ಥೋಟ ಲರ್ವೋ, ಸಫೇದ ಹಾಗು ಲರ್ವೋ ಮುಂತಾದ ಹೈಬ್ರೀಡ ಬೀಜಗಳು ಜನಪ್ರಿಯವಾಗಿವೆ. ಇತ್ತೀಚೆಗೆ ಅವುಗಳನ್ನು ಜಿಲ್ಲೆಯ ಆಯಕಟ್ಟಿನ ಪ್ರದೇಶದಲ್ಲಿ ಬರುವ ಇತರ ತಾಲೂಕಗಳಲ್ಲಿ ಸಹ ಬಿತ್ತಿ ಬೆಳೆಯಲಾಗುತ್ತಿದೆ.

**ಗೋವಿನ ಜೋಳ :** ಮೇಲಿನ ಬೆಳೆಗಳಂತೆ ಇದನ್ನು ಸಹ ಹೆಚ್ಚು ಇಳುವರಿ ನೀಡುವ ಹೈಬ್ರೀಡ ಬೀಜಗಳ ಪರಿಧಿಯಲ್ಲಿ ತರಲಾಗಿದೆ. 'ಡೆಕ್ಕನ್' ಹೈಬ್ರೀಡ ಬೀಜವು ಹೆಚ್ಚು ಕಡಿಮೆ ಮನೆಮಾತಾಗಿದೆ ಎಂದರೆ ಅತಿಶಯೋಕ್ತಿಯಾಗುವುದಿಲ್ಲ. ಅದರ ಪ್ರತಿ ಹೆಕ್ಟೇರಿನ ಉತ್ಪಾದನೆಯೂ ಸಹ ಉತ್ತೇಜನಕಾರಿಯಾಗಿದೆ. ಉದಾಹರಣೆಗಾಗಿ, ಈ ಬೀಜದ ಪ್ರತಿ ಹೆಕ್ಟೇರಿನ ಉತ್ಪಾದನೆಯು ೩೬ ರಿಂದ ೬೨ ಕ್ವಿಂಟಲಾಗಿರುತ್ತದೆ.

**'ಪೂರ್ಣಾ' ರಾಗಿ :** ತುಂಗಭದ್ರಾ ಯೋಜನೆಯ ಅನುಷ್ಠಾನದಿಂದಾಗಿ ಜಿಲ್ಲೆಯ ರೈತರ ಮನಸ್ಸಿಗೆ ಅಧಿಕ ಹಿಡಿಸಿದ ಇನ್ನೊಂದು ಬೆಳೆಯೆಂದರೆ 'ಪೂರ್ಣಾ' ರಾಗಿ. ಜಿಲ್ಲೆಯ ಕೃಷಿ ಕ್ಷೇತ್ರದಲ್ಲಿ ಇದೊಂದು ಹೊಸ ಸಂಶೋಧನೆ (innovation) ಯಾಗಿರುತ್ತದೆ. ಇದು ಅಧಿಕ ಇಳುವರಿ ನೀಡುವುದಲ್ಲದೆ ರೋಗನಿರೋಧಕ ಶಕ್ತಿಯನ್ನು ಸಹ ಹೊಂದಿರುತ್ತದೆ. ಆದುದರಿಂದ, ಆಯಕಟ್ಟಿನ ಪ್ರದೇಶದಲ್ಲಿ ಇದನ್ನು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯಲಾಗುತ್ತಿದೆ.

**ಸೇಂಗಾ ಹಾಗು ಇನ್ನಿತರ ಎಣ್ಣೆಕಾಳುಗಳು :** ತುಂಗಭದ್ರಾ ಯೋಜನೆಯ ಅನುಷ್ಠಾನದಿಂದಾಗಿ ಜಿಲ್ಲೆಯಲ್ಲಿ ಎಣ್ಣೆ

ಕಾಳಿನ ಬೆಳೆಗಳ ಅಭಿವೃದ್ಧಿಗೆ ಒಳ್ಳೆ ಅನುಕೂಲತೆ ಇದೆ. ಆದುದರಿಂದ ಎಣ್ಣೆಕಾಳಿನ ಬೆಳೆಗಳನ್ನು ಅದರಲ್ಲೂ ವಿಶೇಷವಾಗಿ ಅಧಿಕ ಉತ್ಪಾದನೆ ನೀಡುವ "ಅಸೀರಿಯಾ ಮಿಟಿಂಡೆ" ಎಂಬ ಸೇಂಗಾ ಬೀಜವನ್ನು ಜನಪ್ರಿಯಗೊಳಿಸಲಾಗಿದೆ. ಇದರ ಜೊತೆಗೆ, T. M. V-2 ಸೇಂಗಾ ಬೀಜವು ಸಹ ಪ್ರಸಿದ್ಧಿಯನ್ನು ಪಡೆದಿದೆ. ಇವೆಲ್ಲವುಗಳು ಹಣದ ಬೆಳೆಗಳಾಗಿರುವುದರಿಂದ ರೈತರನ್ನು ಆರ್ಥಿಕವಾಗಿ ಮುಂದೆ ಬರುವಂತೆಯೂ ಮಾಡಿವೆ.

ಹತ್ತಿ : ಜಿಲ್ಲೆಯ ಆಳವಾದ ಕಪ್ಪು ಮಣ್ಣು "ಹತ್ತಿ" ಬೆಳೆಗೆ ಹೇಳಿ ಮಾಡಿಸಿದಂತಿದೆ. ನೀರಾವರಿ ಪ್ರದೇಶದಲ್ಲಿ "ಲಕ್ಷ್ಮಿ" ಹತ್ತಿಯ ಉತ್ಪಾದನೆ ಅಷ್ಟೊಂದು ಪ್ರೋತ್ಸಾಹಿತವಾಗದೆ ಇದ್ದುದರಿಂದ "ಹಂಪಿ" ಎಂಬ ಹೊಸ ಹೈಬ್ರೀಡ ಬೀಜವನ್ನು ಮೊದಲನೇ ಬಾರಿ ೧೯೬೮ ರಲ್ಲಿ ೬೨ ಹೆಕ್ಟೇರುಗಳಲ್ಲಿ ಬಿತ್ತಲಾಯಿತು. ಅಂದಿನಿಂದ ಇಂದಿನವರೆಗಿನ ಅವಧಿಯಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಇಂದು "ಹೈಬ್ರೀಡ-೪" ಹಾಗು "ವರಲಕ್ಷ್ಮಿ" ಎಂಬ ಹೆಚ್ಚು ಇಳುವರಿ ನೀಡುವ ಹೈಬ್ರೀಡ ಬೀಜಗಳು ತುಂಬ ಜನಪ್ರಿಯವಾಗಿವೆ. ಉದಾಹರಣೆಗಾಗಿ—ಆರು ವರ್ಷಗಳ ಹಿಂದೆ ಈ ಹತ್ತಿಯ ಬೆಳೆ ಜಿಲ್ಲೆಯ ಕೇವಲ ೪೦೦ ಹೆಕ್ಟೇರುಗಳನ್ನು ಆವರಿಸಿತ್ತು. ಇಂದು ಅದರ ವಿಶಾಲತೆ ೪೪೦೪೭ ಹೆಕ್ಟೇರುಗಿಂತಲೂ ಹೆಚ್ಚಾಗಿದೆ. ಹತ್ತಿಯ ಒಟ್ಟು ಉತ್ಪಾದನೆಯ ಪ್ರಮಾಣ ೪ ಲಕ್ಷ ಬೇಲುಗಳಿಗಿಂತಲೂ ಅಧಿಕವಾಗಿದೆ.

ಹೈಬ್ರೀಡ ಹತ್ತಿಯ ಬಿತ್ತನೆಯನ್ನು ಜನಪ್ರಿಯಗೊಳಿಸಲು ಸರಕಾರ "ಹತ್ತಿ ಅಭಿವೃದ್ಧಿ ಯೋಜನೆ"(Cotton Development Scheme) ಯನ್ನು ಅನುಷ್ಠಾನಕ್ಕೆ ತಂದಿರುವುದು ಒಂದು ವಿಶೇಷದ ಸಂಗತಿಯಾಗಿದೆ. ಜಿಲ್ಲೆಯ ರೈತರು ಈ 'ಯೋಜನೆ'ಯ ಸಂಪೂರ್ಣ ಲಾಭವನ್ನು ಪಡೆದುಕೊಂಡಿದ್ದಾರೆ.

**(iv) ದ್ವಿಬೆಳೆ ಹಾಗು ಬಹು-ಬೆಳೆಯ ಜನಪ್ರಿಯತೆ :** ಹಿಂದೆ ಕನಸಾಗಿದ್ದ "ದ್ವಿ-ಬೆಳೆ" (Double Cropping) ಹಾಗು "ಬಹು-ಬೆಳೆ" (Multiple Cropping) ತುಂಗಭದ್ರಾ ಯೋಜನೆಯ ಅನುಷ್ಠಾನದಿಂದಾಗಿ ಇಂದು ನನಸಾಗಿರುತ್ತವೆ. ಇತ್ತೀಚಿಗೆ ಈ ಎರಡು ವಿಧಾನಗಳು ಜನಪ್ರಿಯವಾಗಿರುತ್ತವೆ. ಉದಾಹರಣೆಗಾಗಿ "ದ್ವಿ-ಬೆಳೆ" ವಿಧಾನದ ಪ್ರಸರಣೆ ಸುಮಾರು ಎಂಟು ವರ್ಷಗಳ ಅವಧಿಯಲ್ಲಿ ೨೩,೦೦೦ ಹೆಕ್ಟೇರುಗಳಿಂದ ೮೪,೯೫೭ ಹೆಕ್ಟೇರುಗಳಷ್ಟಾಗಿದೆ.

ವರ್ಷದಲ್ಲಿ ಎರಡಕ್ಕಿಂತಲೂ ಅಧಿಕ ಬೆಳೆಗಳನ್ನು ನಿಡುವ "ಬಹು-ಬೆಳೆ"ಯ (Multiple Cropping) ಕೇಂದ್ರವನ್ನು ಆಯುಕಟ್ಟಿನ ಪ್ರದೇಶದ ಸಿಂಧನೂರು ತಾಲೂಕಿನಲ್ಲಿ ಪ್ರಾರಂಭಿಸಲಾಗಿದೆ. ೧೯೭೧ ರಲ್ಲಿ ಪ್ರಾರಂಭವಾದ ಈ ಯೋಜನೆಯ ವೆಚ್ಚ ೫.೪೯ ಲಕ್ಷ ರೂಪಾಯಿಗಳೆಂದು ಅಂದಾಜುಮಾಡಲಾಗಿದೆ. ಈ ಯೋಜನೆ ೧೮,೮೮೨ ಹೆಕ್ಟೇರು ಭೂಮಿಯನ್ನು ಆವರಿಸಿದೆ.

ಒಟ್ಟಿನಲ್ಲಿ, "ದ್ವಿ-ಬೆಳೆ" ಹಾಗು "ಬಹು-ಬೆಳೆ" ಯ ಕಾರ್ಯಕ್ರಮಗಳು ಕೃಷಿ ಕ್ಷೇತ್ರದ ಒಟ್ಟು ಉತ್ಪಾದನೆಯನ್ನು ಗಮನಾರ್ಹವಾಗಿ ಹೆಚ್ಚಿಸಿವೆ.

(v) ಸಾಂದ್ರ ಕೃಷಿ ಅಭಿವೃದ್ಧಿ ಕಾರ್ಯಕ್ರಮದ ಜಿಲ್ಲೆ (Intensive Agricultural District Programme): "ಯೋಜನೆ"ಯ ಅನುಷ್ಠಾನದಿಂದಾಗಿ ಉಂಟಾಗಲಿರುವ ಬೃಹತ್ ಪ್ರಮಾಣದ ಕೃಷಿ ಅಭಿವೃದ್ಧಿಯನ್ನು ಅನುಲಕ್ಷಿಸಿ ಕರ್ನಾಟಕ ಹಾಗು ಭಾರತ ಸರಕಾರದವರು "ಫೋರ್ಡ ಫೌಂಡೇಷನ್" ಮತ್ತು ಅಮೇರಿಕೆಯ ಸಹಾಯ ಆಯೋಗದವರು, ೧೯೬೦ರ ಎಪ್ರಿಲ್ ತಿಂಗಳಲ್ಲಿ ಸಾಂದ್ರ ಕೃಷಿ ಅಭಿವೃದ್ಧಿ ಕಾರ್ಯಕ್ರಮವನ್ನು ಪ್ರಾರಂಭಿಸಿದರು. ಈ ಕಾರ್ಯಕ್ರಮ ಕೃಷಿ ಉತ್ಪಾದನೆಯನ್ನು ಗಮನಾರ್ಹವಾಗಿ ಹೆಚ್ಚಿಸಿದೆ.

ಮೇಲಿನ ಕಾರ್ಯಕ್ರಮದ ಜೊತೆಗೆ, ೧೯೬೬-೬೭ ರಲ್ಲಿ "ಸಾಂದ್ರ ಕೃಷಿ ಅಭಿವೃದ್ಧಿ ಪ್ರಾದೇಶಿಕ ಕಾರ್ಯಕ್ರಮ" (Intensive Agricultural Area Programme)ವನ್ನು ಸಹ ಅನುಷ್ಠಾನದಲ್ಲಿ ತರಲಾಗಿದೆ. ಹೆಚ್ಚು ಇಳುವರಿ ನೀಡುವ ಹೈಬ್ರೀಡ ಬೀಜಗಳಿಂದ ಉಂಟಾಗುವ ಉತ್ಪಾದನೆಯನ್ನು ಗರಿಷ್ಠ ಮಟ್ಟಕ್ಕೆ ಏರಿಸುವುದೇ ಈ ಕಾರ್ಯಕ್ರಮದ ಗುರಿಯಾಗಿದೆ. ೧೯೬೮-೬೯ ರಲ್ಲಿ ಈ ಕಾರ್ಯಕ್ರಮದ ವ್ಯಾಪ್ತಿ ಕೇವಲ ೧೩೦೨೮ ಹೆಕ್ಟೇರುಗಳಾಗಿತ್ತು. ಹಾಗು ಇದರ ಮೊತ್ತ ೧೯೭೩-೭೪ ನೆಯ ವರ್ಷದ ಕೊನೆಯವರೆಗೆ ೬೪೪೧೨

ಹೆಕ್ಟೇರುಗಳಿಗೇರಿತ್ತು. ಈ ಸಂಗತಿ ಕಾರ್ಯಕ್ರಮದ ಜನ ಪ್ರಿಯತೆಯನ್ನು ಸೂಚಿಸುತ್ತದೆ.

**(vi) ಸರಕಾರಿ ಬೇಸಾಯ ಕೇಂದ್ರ (State Farming Centre) :** "ಯೋಜನೆ" ಆಶ್ರಯದಲ್ಲಿ ಬೆಳೆದು ಬಂದ ಮಹತ್ವದ ಕೇಂದ್ರಗಳಲ್ಲಿ ಇದೊಂದಾಗಿದೆ. "ಸಿಂಧನೂರು "ನಿಂದ ೬ ಕಿ. ಮಿ. ದೂರವಿರುವ "ಜವಳಿಗೆರೆ" ಎಂಬಲ್ಲ ಇದು ೧೯೬೯ ರಿಂದ ಕಾರ್ಯಾರಂಭಿಸಿದೆ.

೭೦೦೦ ಹೆಕ್ಟೇರು ಭೂಮಿಯನ್ನು ಹೊಂದಿರುವ ಈ ಕೇಂದ್ರವು, (೧) ಹೈಬ್ರೀಡ ಗೋಧಿ, ಹತ್ತಿ, ಜೋಳ ಮೆಕ್ಕೆ ಜೋಳ, ಸಜ್ಜೆ ಮುಂತಾದ ಹೆಚ್ಚು ಇಳುವರಿ ನೀಡುವ ಬೀಜ ಗಳನ್ನು ಉತ್ಪಾದಿಸುವ ಹಾಗು ಬಹುಗೊಳಿಸುವ(multiple) ಮತ್ತು (೨) ರೈತರಿಗೆ ನೀರಾವರಿಯ ಲಾಭ ರಾಸಾಯನಿಕ ಗೊಬ್ಬರ, ಹೆಚ್ಚು ಇಳುವರಿ ನೀಡುವ ಬೀಜ ಮತ್ತು ಒಕ್ಕಲು ತನದ ಯಂತ್ರೋಪಕರಣ ಮುಂತಾದವುಗಳ ಉಪಯೋಗ ವನ್ನು ತಿಳಿಸುವ ಅಯಕಟ್ಟಿನ ಪ್ರದೇಶದಲ್ಲಿ ಒಂದು ಪ್ರಾತಿಕ್ಷಿ ಕೆಯ ಕೇಂದ್ರದಂತೆ ಕಾರ್ಯ ಕೈಕೊಳ್ಳುವ ಎರಡು ಪ್ರಮುಖ ಗುರಿಗಳನ್ನು ಹೊಂದಿದೆ.

ಈ ಕೃಷಿ ಕೇಂದ್ರಕ್ಕೆ ರಶಿಯಾ ಸರಕಾರದ ನೆರವು ದೊರೆ ತಿದೆ. ಸೋವಿಯತ್ ಒಕ್ಕೂಟದ ಸರಕಾರ ರೂ. ೩೧ ಲಕ್ಷ ಬೆಲೆಬಾಳುವ ಬುಲ್‌ಡೋಜರ, ವಿವಿಧ ಬಗೆಯ ಟ್ರ್ಯಾಕ್ಟರ, ಸುಗ್ಗಿ ಮಾಡುವ ಮುಂತಾದ ಯಂತ್ರಗಳನ್ನು ನೀಡಿದೆ.

"ಉದ್ದ ಎಳೆಯ ಹತ್ತಿ" (Long Staple Cotton) ಯನ್ನು ಅಧಿಕ ಪ್ರಮಾಣದಲ್ಲಿ ಬೆಳೆಯುವುದು ಈ ಕೇಂದ್ರದ ಒಂದು ವಿಶೇಷವಾಗಿದೆ. ಈ ವಿಧದ ಹತ್ತಿಯ ಪ್ರತಿ ಹೆಕ್ಟೇರಿನ ಉತ್ಪಾದನೆ "ಸುಡಾನ" ದೇಶದ ಪ್ರತಿ ಹೆಕ್ಟೇರಿನ ಇಳುವರಿಗಿಂತಲೂ ಅಧಿಕ ಪ್ರಮಾಣದ್ದಾಗಿದೆ. ಈ ಕೇಂದ್ರವು "ಉದ್ದ ಎಳೆಯ ಹತ್ತಿ"ಯನ್ನು ಹೆಚ್ಚಿನ ಪ್ರಮಾಣದಲ್ಲಿ ಬೆಳೆದು ಇಡೀ ಜಿಲ್ಲೆಗೆ "ಭಾರತದ ಈಜಿಪ್ತ" ಎಂಬ ಹೆಸರನ್ನು ಗಳಿಸಿಕೊಟ್ಟಿದೆ.

(vii) **ಬೀಜ ಸಂಸ್ಕರಣ ಕೇಂದ್ರಗಳು** (Seed Farms) : "ಯೋಜನೆ" ಅನುಷ್ಠಾನದಿಂದಾಗಿ ಹೈಬ್ರೀಡ ಬೀಜಗಳಿಗಾಗಿ ಬೇಡಿಕೆ ದಿನೇದಿನೇ ಹೆಚ್ಚುತ್ತಿದೆ. ಜಿಲ್ಲೆಯಲ್ಲಿ ನಾಲ್ಕು ಬೀಜ ಸಂಸ್ಕರಣ ಕೇಂದ್ರಗಳು ಕಾರ್ಯ ಕೈಕೊಳ್ಳುತ್ತಿವೆ. ಹೈಬ್ರೀಡ ಬೀಜಗಳ ಉತ್ಪಾದನೆಯೇ ಈ ಕೇಂದ್ರಗಳ ಮುಖ್ಯ ಉದ್ದೇಶವಾಗಿದೆ.

೧೯೬೯ ರಲ್ಲಿ "ಕೇಂದ್ರೀಯ ಬೀಜ ಸಂಸ್ಕರಣ" ಸಂಸ್ಥೆ (Central Seed Farm)ಯು, "ಜವಳಗೆರೆ" ಎಂಬ ಊರಲ್ಲಿ ಸ್ಥಾಪಿತವಾಯಿತು. ಇದು ೩೦೬೩ ಹೆಕ್ಟೇರು ಜಮೀನನ್ನು ಹೊಂದಿದೆ. ಹೆಚ್ಚು ಇಳುವರಿ ನೀಡುವ ಗೋಧಿ, ಹೈಬ್ರಿಡ ಜೋಳ, ಹೈಬ್ರಿಡ ಮೆಕ್ಕೆ ಜೋಳ, ಹೈಬ್ರಿಡ ಸಜ್ಜಿ ಮುಂತಾದ ಬೀಜಗಳ ಸಂಸ್ಕರಣೆಯನ್ನು ಮಾಡುವುದೇ ಈ ಕೇಂದ್ರದ ಗುರಿಯಾಗಿರುತ್ತದೆ.

(viii) ಮಣ್ಣಿನ ಪರೀಕ್ಷೆಯ ಪ್ರಯೋಗಾಲಯ (Soil Testing Laboratary) : ಸಿಂಧನೂರು ತಾಲೂಕಿನ "ದಡೇಸೂಗೂರ" ಎಂಬಲ್ಲಿ ಮಣ್ಣಿನ ಪ್ರಯೋಗಾಲಯವಿದೆ. ಇದು ಭೂಮಿಯ ಫಲವತ್ತತೆಯನ್ನು ಪರೀಕ್ಷಿಸಿ ಅದರ ಗುಣಮಟ್ಟವನ್ನು ನಿರ್ಧರಿಸುತ್ತದೆ ಇದು ಫಲವತ್ತತೆಯ ಮಟ್ಟಕ್ಕನುಗುಣವಾಗಿ ಯೋಗ್ಯ ಬೆಳೆಗಳ ಶಿಫಾರಸನ್ನು ಸಹ ಮಾಡುತ್ತದೆ. ಈ ಕೇಂದ್ರವು ಪ್ರತಿ ವರ್ಷ ೧೫,೦೦೦ ಸ್ಯಾಂಪಲ್‌ಗಳನ್ನು ಪರೀಕ್ಷಿಸುವ ಸಾಮರ್ಥ್ಯವನ್ನು ಹೊಂದಿದೆ.

(ix) ವೈಜ್ಞಾನಿಕ ದೃಷ್ಟಿಕೋಣದ ಬೆಳವಣಿಗೆ : 'ಯೋಜನೆ', ಉತ್ಪಾದನೆಯ ಪ್ರಮಾಣ ಹೆಚ್ಚಿಸುವದಲ್ಲದೆ, ರೈತರಲ್ಲಿ ಬೇಸಾಯದ ಬಗ್ಗೆ ವೈಜ್ಞಾನಿಕ ದೃಷ್ಟಿಕೋಣವನ್ನು ಬೆಳೆಸಿದೆ. ಇದು ಅದರ ಅತ್ಯಂತ ಮಹತ್ವದ ಸಾಧನೆಗಳಲ್ಲಿ ಒಂದಾಗಿದೆ. ಇದು ರೈತರಲ್ಲಿಯ ಹಳೆಯ ಉಪಕರಣಗಳ ಬಗೆಗಿರುವ ಪರಂಪರಾಗತ ಮೋಹವನ್ನು ಸಾಕಷ್ಟು ಕಡಿಮೆ ಮಾಡಿದೆ. ಕೃತಕ ಗೊಬ್ಬರದಲ್ಲಿ ಎಲುಬಿನ ಪ್ರಮಾಣ ಉಂಟೆಂದು, ಅದನ್ನು ತನ್ನ ಭೂತಾಯಿಗೆ ಸೇವಿಸಲು ಕೊಡುವುದು ಪಾಪವೆಂದು ಸಾರುವ ರೈತನನ್ನು ಇಂದು ಹುಡುಕುವುದು ಕಷ್ಟವಾಗಿದೆ. ಓಬಿರಾಯನ ಕಾಲದ ಉಪಕರಣಗಳಿಗೆ ತಿಲಾಂಜಲಿಯನ್ನಿತ್ತು ಹೊಸ ಉಪಕರಣಗಳ ಉಪಯೋಗದಲ್ಲಿ ಈ ಭಾಗದ ರೈತ ದಿನೇ ದಿನೇ ಮುಂದುವರಿಯುತ್ತಿದ್ದಾನೆ. ಅಷ್ಟಲ್ಲದೆ, ನೂತನ ಕೃಷಿ ಜ್ಞಾನದಿಂದ ಇನ್ನೂ ಹೆಚ್ಚಿನ ಪ್ರಗತಿ ಹಾಗು ಸುಧಾರಣೆ ಸಾಧ್ಯವೆಂಬ ತಿಳಿವಳಿ

ಕೆಯೂ ಅವನಲ್ಲಿ ಸ್ಪಷ್ಟವಾಗಿ ಮೂಡಿದೆ. ಇಂದು, ಆತ ತನ್ನ ತಿಳಿವಳಿಕೆ ಹಾಗು ತಜ್ಞನ ಸಲಹೆಯ ಮೇರೆಗೆ ಗೊಬ್ಬರದ ಪ್ರಮಾಣ, ಬೀಜದ ನಮೂನೆಗಳ ಉಪಯೋಗ, ಸಸಿಗಳ ನಡುವಿನ ಅಂತರ, ನೀರು ಹರಿಸುವ ಅವಧಿ ಇತ್ಯಾದಿ ವಿಷಯಗಳಲ್ಲಿ ಪ್ರಯೋಗಗಳನ್ನು ಯತ್ನಿಸುತ್ತಿದ್ದಾನೆ. ಒಟ್ಟಿನಲ್ಲಿ ಕೃಷಿಯೆಂದರೆ ಹೊಸ ಬೆಳೆಗಳನ್ನು ಬೆಳೆಯುವ ಮತ್ತು ಪರಿಚಿತ ಬೆಳೆಗಳ ಫಲವನ್ನು ಹೆಚ್ಚಿಸುವಂಥ ಒಂದು ಬದಲಾಗಬಲ್ಲ ವಿಧಾನವೆಂಬ ಅರಿವು ರೈತನಲ್ಲಿ ಈಗ ಉಂಟಾಗಿದೆ. ಹಳೆಯ ಸಾಂಪ್ರದಾಯಿಕತೆಯ ಬದಲಾಗಿ ವೈಜ್ಞಾನಿಕ ತಿಳಿವಳಿಕೆಯನ್ನು ಬಳಸಿಕೊಂಡು ಬದಲಾವಣೆ ಹಾಗು ಪ್ರಗತಿಯನ್ನು ಸಾಧಿಸುವಲ್ಲಿ ಆತನಿಗೆ ನಂಬಿಕೆ ಹುಟ್ಟಿದೆ. ವೈಜ್ಞಾನಿಕ ತಿಳಿವಳಿಕೆಯ ಬಳಕೆಯಿಂದ, ನೆಲದ, ಗಾಳಿಯ ಮತ್ತು ಬೆಳೆಯ ಬಗ್ಗೆ ಹೆಚ್ಚು ಅರಿವು ಉಂಟಾಗಿ ಫಲದ ಪ್ರಮಾಣ ಹಾಗು ಗುಣದಲ್ಲಿಯೂ ಸುಧಾರಣೆ ಸಾಧಿಸಬಹುದೆಂದು ಆತನಿಗೆ ಮನವರಿಕೆಯಾಗುತ್ತದೆ. ಇಂದಿನ ಕೃಷಿಕನಲ್ಲಿ ನೂತನ ಜ್ಞಾನ, ತಂತ್ರ, ಬೆಳೆಗಳ ವೈವಿಧ್ಯತೆಯ ವಿಧಾನ ಒಂದು ಹೊಸ ಭರವಸೆಯನ್ನು ನೀಡಿವೆ.

ಒಟ್ಟಿನಲ್ಲಿ, ಅಧಿಕ ಇಳುವರಿಯ ಬೀಜ ರಾಸಾಯನಿಕ ಗೊಬ್ಬರ, ಹಾಗು ಯಂತ್ರೋಪಕರಣಗಳ ಉಪಯೋಗ 'ಯೋಜನೆ'ಯಿಂದಲೇ ಸಾಧ್ಯವಾಗಿದೆ. ದ್ವಿ ಬೆಳೆ ಮತ್ತು ಬಹು-ಬೆಳೆ, ಸಾಂದ್ರಕೃಷಿ ಅಭಿವೃದ್ಧಿ ಕಾರ್ಯಕ್ರಮದ ಜಿಲ್ಲೆ-(I.A.D.P.) ಹಾಗು ಸರಕಾರಿ ಬೇಸಾಯ ಕೇಂದ್ರ ಮುಂತಾದವುಗಳನ್ನು ಸಹ 'ಯೋಜನೆ' ಯೇ ಅನುಷ್ಠಾನಕ್ಕೆ

ತಂದಿರುತ್ತದೆ. ಇವೆಲ್ಲವುಗಳ ಪರಿಣಾಮವಾಗಿ ಕೃಷಿಯು ವೈಜ್ಞಾನಿಕವಾಗಿ, ಪ್ರಗತಿಶೀಲವಾಗಿ ಪರಿವರ್ತನೆಯನ್ನು ಹೊಂದಿದೆ. ಜಿಲ್ಲೆಯ ಕೃಷಿ ಉತ್ಪಾದನೆ ಗಮನಾರ್ಹವಾಗಿ ಹೆಚ್ಚಿರುತ್ತದೆ. ೧೯೭೩ ರ ಎಪ್ರಿಲದ ಹೊತ್ತಿಗೆ ಜಿಲ್ಲೆಯ ಆಹಾರ ಬೆಳೆಗಳ ಉತ್ಪಾದನೆ ೨೮೩.೭೮೪ ಟನ್, ಎಣ್ಣೆಕಾಳು ಹಾಗು ಸಾಂಬಾರು ಪದಾರ್ಥದ ಉತ್ಪಾದನೆ ೭೨.೦೨೧ ಟನ್ ನಾರು ಬೆಳೆ (ಹತ್ತಿ)ಯು ಉತ್ಪಾದನೆ ೯೩ ೨೯೪ ಟನ್ ಹಾಗು ಕಬ್ಬಿನ ಉತ್ಪಾದನೆ ೧೦.೦೬೪ ಟನ್ನುಗಳಿಗೆ ತಲುಪಿತ್ತು. ಇಂಥ ಪರಿಣಾಮಕಾರಿಯಾದ ಹೆಚ್ಚಳಕ್ಕೆ "ಕೃಷಿಕ್ರಾಂತಿ" ಎಂದು ತಜ್ಞರು ಸಂಭೋದಿಸಿದ್ದಾರೆ. ಈ ರೀತಿಯಾಗಿ 'ಯೋಜನೆ' ಜಿಲ್ಲೆಯಲ್ಲಿ "ಹಸಿರುಕ್ರಾಂತಿ"ಗೆ ಕಾರಣೀಭೂತವಾಗಿರುತ್ತದೆ. ಇಷ್ಟಲ್ಲದೆ ಅದು ರೈತನಿಗೆ ಭಾಗ್ಯದ ಬಾಗಿಲನ್ನು ಸಹ ತೆರೆದಿರುತ್ತದೆ. ಧಾನ್ಯಲಕ್ಷ್ಮಿ ಈ ಭಾಗದ ರೈತರ ಮೇಲೆ ತನ್ನ ಕೃಪಾಕಟಾಕ್ಷವನ್ನು ಬೀರಿರುತ್ತಾಳೆ.

ಕೃಷಿಯ ಉತ್ಪಾದನಾ ಪ್ರಮಾಣವನ್ನು ಗಮನಾರ್ಹವಾಗಿ ವೃದ್ಧಿಸುವುದಲ್ಲದೆ, 'ಯೊಜನೆ' ಈ ಕ್ಷೇತ್ರದ ಸರ್ವಾಂಗೀಣ ಉನ್ನತಿಗಾಗಿ ಇನ್ನಿತರ ಸಹಾಯ ಘಟಕಗಳಾದ ಪಶು ಸಂಗೋಪನೆ, ತೋಟಗಾರಿಕೆ, ಮೀನುಗಾರಿಕೆ, ಅರಣ್ಯಾಭಿವೃದ್ಧಿ ಸಹಕಾರಿ ಪತ್ತಿನ ವ್ಯವಸ್ಥೆ, ಮಾರುಕಟ್ಟೆಯ ವ್ಯವಸ್ಥೆ ಮುಂತಾದವುಗಳನ್ನು ಅಭಿವೃದ್ಧಿ ಗೊಳಿಸಿರುತ್ತದೆ. ಇದು 'ಯೋಜನೆ'ಯ ಇನ್ನೊಂದು ಮಹತ್ಸಾದನೆಯಾಗಿದೆ. 'ಯೋಜನೆ'ಯ ಮಹತ್ವವನ್ನು ಪರಿಪೂರ್ಣವಾಗಿ ಅರಿಯಲು ಸಹಾಯಕ ಘಟಕಗಳ ಅಭಿವೃದ್ಧಿಯನ್ನು ಕುರಿತು ತಿಳಿ

ಯುವುದು ಆವಶ್ಯಕವಾಗಿರುತ್ತದೆ. ಆದುದರಿಂದ ಅವುಗಳ ಸ್ಥೂಲ ವಿವರಣೆಯನ್ನು ಈ ಕೆಳಗೆ ನೀಡಲಾಗಿದೆ.

## ೬. "ಯೋಜನೆ"ಯಿಂದ ಉಂಟಾದ ಕೃಷಿ ಸಹಾಯಕ ಘಟಕಗಳ ಅಭಿವೃದ್ಧಿ

**(i) ಪಶು ಸಂಗೋಪನೆ**—Animal Husbandary : ಬರಗಾಲಗಳಿಗೆ ಕುಪ್ರಸಿದ್ಧವಾದ ಈ ಜಿಲ್ಲೆಯಲ್ಲಿ ಹಿಂದೆ 'ಪಶು ಸಂಗೋಪನ ವಿಭಾಗ' ಅತ್ಯಂತ ದುರ್ದೆಸೆಯಲ್ಲಿತ್ತು. 'ಯೋಜನೆ' ಈ ವಿಭಾಗದ ಬೆಳವಣಿಗೆಗೆ ಒಂದು 'ಆದರ್ಶ ವಾತಾವರಣ' ವನ್ನು ಕಲ್ಪಿಸಿಕೊಟ್ಟಿದೆ ಎಂದರೆ ಏನೂ ಅತಿಶಯೋಕ್ತಿಯಲ್ಲ.

'ಯೋಜನೆ'ಯ ಅನುಷ್ಠಾನದ ಪೂರ್ವದಲ್ಲಿ ಇಡೀ ಜಿಲ್ಲೆಯಲ್ಲಿ ಒಂದೇ ಒಂದು ಸಣ್ಣ ಪ್ರಮಾಣದ ಪಶು ಆಸ್ಪತ್ರೆ ಇದ್ದಿತು. ಇಂದು ಅವುಗಳ ಸಂಖ್ಯೆ ೩೪ಕ್ಕೆ ಏರಿರುತ್ತದೆ. ಆಯಕಟ್ಟಿನ ಐದು ತಾಲೂಕುಗಳಲ್ಲಿ ಮೇವಿನ ಬೆಳೆ (Fodder Crop) ಯನ್ನು ಅಭಿವೃದ್ಧಿಗೊಳಿಸಲಾಗಿದೆ. ಹೊಸ ತಳಿಯ ದನಗಳನ್ನು ಬೆಳೆಸುವ (Breed) ಕಾರ್ಯಕ್ರಮದ ಅಂಗವಾಗಿ ಒಂದು "ಕೇಂದ್ರೀಯ ವೀರ್ಯ ಸಂಗ್ರಹಣ"ಯ ಕೇಂದ್ರವೊಂದನ್ನು 'ಮುಸಿರಾಬಾದ'ದಲ್ಲಿ ಸ್ಥಾಪಿಸಲಾಗಿದೆ. ಈ

ಕೇಂದ್ರವು 'ಜೆರಸಿ' 'ಹೋಲ್‌ಸ್ಟೈನ್' 'ಕೆಂಪು' ಹಾಗೂ 'ಮುರ್ರಾ' ಎಮ್ಮೆಗಳನ್ನು ಅಭಿವೃದ್ಧಿಗೊಳಿಸಿದೆ. ಇಂದು ಈ ಕೇಂದ್ರವನ್ನು "ಇಂಡೊ-ಡ್ಯಾನಿಸ್" ಯೋಜನೆ ತನ್ನ ಸ್ವಾಧೀನಕ್ಕೆ ತೆಗೆದುಕೊಂಡಿದೆ. ಜಿಲ್ಲೆಯ ಜನ ನಿಬಿಡ ಪ್ರದೇಶಗಳಿಗೆ ಉತ್ತಮ ಹಾಲನ್ನು ಸರಬರಾಜು ಮಾಡಲು "ಡೈರಿ ಅಭಿವೃದ್ಧಿ ಯೋಜನೆ"ಯನ್ನು ಪ್ರಸ್ತುತ ಯೋಜನೆಯಲ್ಲಿ ಅನುಷ್ಠಾನದಲ್ಲಿ ತರುವ ಕಾರ್ಯಕ್ರಮವನ್ನು ಹಾಕಿಕೊಂಡಿದ್ದಾರೆ. ಆಯುಕಟ್ಟಿನ ಪ್ರದೇಶದ ಆಂಧ್ರದ ನೆಲಸಿಗರು ಉತ್ತಮ ಹಾಲನ್ನು ಕರೆಯುವ ಎಮ್ಮೆಗಳನ್ನು ಹೊಂದಿ ಸಾಕಷ್ಟು ಹಾಲನ್ನು ಉತ್ಪಾದಿಸಿ ಮುಂಬರುವ "ಡೈರಿ ಅಭಿವೃದ್ಧಿ ಯೋಜನೆ"ಗೆ ಈಗಾಗಲೇ ನಾಂದಿ ಹಾಡಿರುತ್ತಾರೆ. ಅಲ್ಲದೆ, ಸಹಕಾರಿ ಸಂಘಗಳು ಸ್ಥಾಪಿತವಾಗಿ ಮಾನ್ವಿಯ ಸುತ್ತ ಮುತ್ತಲಿನ ಪ್ರದೇಶಗಳಿಂದ ದೊಡ್ಡ ಪ್ರಮಾಣದಲ್ಲಿ ಶುದ್ಧವಾದ ಹಾಲು ಜಿಲ್ಲೆಯ ಪ್ರಮುಖ ನಗರವಾದ ರಾಯಚೂರಿಗೆ ಒದಗಿಸಲ್ಪಡುತ್ತದೆ.

(ii) ತೋಟಗಾರಿಕೆ (Horticulture) : ತುಂಗಭದ್ರೆಯ ನೀರು ಹರಿಯುವ ಮುನ್ನ ಈ ವಿಭಾಗ ಒಣಗಿದಂತೆ ನಿರ್ಜೀವವಾಗಿತ್ತು. ಎರಡನೆಯ ಪಂಚವಾರ್ಷಿಕ ಯೋಜನೆಯ ಮಧ್ಯದಲ್ಲಿ ತೋಟಗಾರಿಕೆಯ ಅಭಿವೃದ್ಧಿ ಕಾರ್ಯವನ್ನು ಜಿಲ್ಲೆಯಲ್ಲಿ ಪ್ರಾರಂಭಿಸಲಾಯಿತು. ನಾಲ್ಕನೆಯ ಪಂಚವಾರ್ಷಿಕ ಯೋಜನೆಯ ಮುಕ್ತಾಯದ ಹೊತ್ತಿಗೆ ಆಯುಕಟ್ಟಿನ ೧೪೧೭ ಹೆಕ್ಟೇರು ಭೂಮಿಯಲ್ಲಿ "ಹಣ್ಣಿನ ಅಭಿವೃದ್ಧಿ ಯೋಜನೆ"ಯನ್ನು ಅನುಷ್ಠಾನದಲ್ಲಿ

ತರಲಾಗಿತ್ತು. ಕಾಯಿಪಲ್ಲೆ ಬೆಳೆಯುವ ಪ್ರದೇಶವನ್ನು ಸಹ ವಿಸ್ತರಿಸಲಾಯಿತು. ಬೆಳೆಯುವ ಕಾಯಿಪಲ್ಲೆಗೆ ಇಂದು ಸ್ಥಳೀಯ ಮಾರುಕಟ್ಟೆಯಲ್ಲಿಯೇ ಹೆಚ್ಚಿನ ಬೇಡಿಕೆ ಬರುತ್ತಿದೆ. ಈ ಹಿಂದೆ ಜಿಲ್ಲೆಯಲ್ಲಿ ಕಾಯಿ ಎಂದರೆ "ಬದನೆಕಾಯಿ" ಪಲ್ಲೆ ಎಂದರೆ "ಪುಂಡೆಪಲ್ಲೆ" ಎಂದು ಜನರು ನಗೆಯಾಡುತ್ತಿದ್ದರು. ಇಂದು ಪರಿಸ್ಥಿತಿ ಪರಿಣಾಮಕಾರಿಯಾಗಿ ಸುಧಾರಿಸಿದೆ. ಎಲ್ಲಾ ತಾಲೂಕುಗಳಲ್ಲಿಯೂ "ತೋಟಗಾರಿಕೆ ಸಂಘ"ಗಳು ಸ್ಥಾಪಿತವಾಗಿವೆ. ಅವುಗಳು ಸದಸ್ಯರಿಗೆ ಉಪಯುಕ್ತ ಸಲಹೆ ಹಾಗೂ ಸಹಕಾರಗಳನ್ನು ನೀಡುತ್ತವೆ. ಒಟ್ಟಿನಲ್ಲಿ ಯೋಜನೆ ತೋಟಗಾರಿಕೆಯ ಮಹತ್ವವನ್ನು ಜನರಿಗೆ ಮನದಟ್ಟು ಮಾಡಿಸಿದೆ ಎಂದರೆ ತಪ್ಪಾಗಲಾರದು.

**iii) ಮೀನುಗಾರಿಕೆ ( Fisheries ) :** 'ಯೋಜನೆ' ನೀರು ಲಭ್ಯವಾಗದ ಮುನ್ನ ಜಿಲ್ಲೆ ಹೆಚ್ಚು ಕಡಿಮೆ ಮರಳುಗಾಡಾಗಿತ್ತು. ಅಂದಮೇಲೆ ಮೀನುಗಾರಿಕೆಯ ಅಭಿವೃದ್ಧಿ ಎಂತು? ಆದುದರಿಂದ ಮೀನುಗಾರಿಕೆ ವಿಭಾಗ ತುಂಗಭದ್ರಾ ಯೋಜನೆಯ ಅನುಷ್ಠಾನದಿಂದಲೇ ಪ್ರಾರಂಭವಾಯಿತೆಂದು ಧಾರಾಳವಾಗಿ ಹೇಳಬಹುದು.

ನಾಲ್ಕನೆಯ ಪಂಚವಾರ್ಷಿಕ ಯೋಜನೆಯ ಮುಕ್ತಾಯದ ಹೊತ್ತಿಗೆ ಈ ವಿಭಾಗ ಗಮನಾರ್ಹ ಬೆಳವಣಿಗೆಯನ್ನು ಸಾಧಿಸಿತ್ತು. ೧೯೭೩-೭೪ರ ಹೊತ್ತಿಗೆ ಜಿಲ್ಲೆಯಲ್ಲಿ ಸುಮಾರು ೫೯೩೮ ಹೆಕ್ಟೇರು ಪ್ರದೇಶದ ೧೦೩ ಪ್ರಮುಖ ಕೆರೆ ಹಾಗೂ ೧೬೫ ಹೆಕ್ಟೇರು ಪ್ರದೇಶದ ೧೧೩ ಸಣ್ಣಪ್ರಮಾಣದ ಕೆರೆ

ಗಳಲ್ಲಿ ಮೀನಿನ ವ್ಯವಸಾಯ ನಡೆದಿತ್ತು ಎಂಬ ವಿಷಯ ಮೀನುಗಾರಿಕೆ ವಿಭಾಗದ ಪ್ರಗತಿಯನ್ನು ಸ್ಪಷ್ಟವಾಗಿ ತೋರಿಸುತ್ತದೆ. ಸಧ್ಯದಲ್ಲಿ ತುಂಗಭದ್ರಾ ಜಲಾಶಯದಲ್ಲಿ ಮೀನುಗಾರಿಕೆಯನ್ನು ಅಭಿವೃದ್ಧಿಗೊಳಿಸಲಾಗಿದೆ. ಇಲ್ಲಿ ಸಾಕಿ ಸಲುಹಿದ ಮೀನಿನ ಮರಿಗಳನ್ನು ರಾಜ್ಯದ ಇತರೆಡೆಗಳಲ್ಲಿ ಕೊಂಡೊಯ್ದು ಅವುಗಳ ಸಂತತಿಯನ್ನು ಅಭಿವೃದ್ಧಿಗೊಳಿಸಲಾಗುತ್ತಿದೆ.

ಶ್ರೀಸಾಮಾನ್ಯನಾದ ರೈತನ ಆಹಾರದಲ್ಲಿ ಪ್ರೋಟಿನ್‌ಗಳ ಕೊರತೆ ಬಹಳಷ್ಟಿದೆಯೆಂಬುದು ಸರ್ವವಿದಿತವಾಗಿದೆ. ಈ ಕೊರತೆಯನ್ನು ಪರಿಹರಿಸುವ ದೃಷ್ಟಿಯನ್ನು ಹೊಂದಿ, ಸರಕಾರ ಮೀನುಗಾರಿಕೆ ವಿಭಾಗವನ್ನು ಅಭಿವೃದ್ಧಿಗೊಳಿಸುತ್ತಿದೆ.

(iv) ಅರಣ್ಯಾಭಿವೃದ್ಧಿ (Forest Development): ಅರಣ್ಯಗಳ ಬೆಳವಣಿಗೆಗೆ "ಯೋಜನೆ" ಒಂದು ವರವಾಗಿದೆ. ಸರಕಾರದ ಅರಣ್ಯವರ್ಧಕ ಯೋಜನೆಯು ತುಂಗಭದ್ರಾ ಜಲಾಶಯದ ಸುತ್ತಲೂ ಒಣ ಅರಣ್ಯವರ್ಧನೆ, ನೀರಾವರಿ ವನಗಳು, ನದಿತಟದ ಹಾಗೂ ನಾಲಾ ಸಮೀಪದ ವನಗಳ ರಚನೆ ಮೊದಲಾದ ಮುಖ್ಯ ಉದ್ದೇಶಗಳನ್ನು ಹೊಂದಿದೆ. ಸೌದೆ, ದನಗಳಿಗೆ ಆಹಾರವಾದ ಮೇವು, ಇಮಾರತಿಗೆ ಉಪಯೋಗವಾಗುವ ಹಾಗೂ ಸೌಂದರ್ಯವರ್ಧಕ ಮತ್ತು ಆರ್ಥಿಕವಾಗಿ ಪ್ರಮುಖವಾಗಿರುವ ಸಸಿಗಳನ್ನು ಜಿಲ್ಲೆಯಲ್ಲಿ ಪ್ರಯೋಗಿಸಲಾಗುತ್ತಿದೆ. ೧೯೬೩-೬೪ರಿಂದ ಆಯುಕಟ್ಟು

ಪ್ರದೇಶದಲ್ಲಿ ಅರಣ್ಯವರ್ಧನೆಗಾಗಿ ಹಲವಾರು ಕಾರ್ಯ ಕ್ರಮಗಳನ್ನು ಕೈಕೊಳ್ಳಲಾಗುತ್ತಿದೆ. ಹೊಸ ಸಸ್ಯಗಳನ್ನು ಬೆಳೆಸುವದಲ್ಲದೆ, ಹಳೆಯ ಪ್ರದೇಶಗಳನ್ನು ಮುಂದುವರಿಸಿ ಕೊಂಡು ಬರಲಾಗುತ್ತಿದೆ. ಅಲ್ಲದೆ "ಸಸಿಸಂಗೋಪನ ಶಾಲೆ" (ಐದನೆಯ ಘಟಕ)ಯನ್ನು ಸಹ ನೋಡಿಕೊಳ್ಳಲಾಗುತ್ತಿದೆ.

"ವನಮಹೋತ್ಸವ" ಕಾರ್ಯಕ್ರಮವನ್ನು ಸಾಂಗೋ ಪಾಂಗವಾಗಿ ನಡೆಸಿಕೊಂಡು ಬರಲಾಗುತ್ತಿದೆ. ಮುನಿರಾ ಬಾದ ಹಾಗೂ ಒಡ್ಡರಹಟ್ಟಿಯ "ಸಸಿ ಸಂಗೋಪನಾಲಯ" ಗಳಲ್ಲಿ ವನಮಹೋತ್ಸವ ಕಾಲದಲ್ಲಿ ಬೆಳೆಸಲ್ಪಡುವ ಸಸಿ ಗಳನ್ನುಹೆಚ್ಚಿನ ಪ್ರಮಾಣದಲ್ಲಿ ಇಡಲಾಗಿದೆ.

ಒಟ್ಟಿನಲ್ಲಿ, ನಾಲ್ಕನೆಯ ಯೋಜನೆಯಲ್ಲಿ ಅರಣ್ಯಾಭಿ ವೃದ್ಧಿಗೆ ರೂ. ೨೪,೯೨,೪೮೯ ಗಳನ್ನು ವೆಚ್ಚ ಮಾಡಲಾಗಿದೆ. ವರ್ಷಂಪ್ರತಿ ಮಾರುವ ಗಿಡಮರಗಳಿಂದ ಸರಕಾರದ ಬೊಕ್ಕ ಸಕ್ಕೆ ಇದುವರೆಗೆ ರೂ. ೭,೬೯,೭೫೮ಗಳು ಸಂದಾಯವಾಗಿರು ತ್ತವೆ.

(v) ಸಹಕಾರಿ ಪತ್ತಿನ ವ್ಯವಸ್ಥೆ (Co-operative Credit System) : ನೀರಾವರಿ ಸೌಲಭ್ಯವು ದ್ವಿ-ಬೆಳೆ ಹಾಗೂ ಬಹು-ಬೆಳೆಗಳಿಗೆ ಅನುವು ಮಾಡಿಕೊಡುತ್ತದೆ. ಇದು ಅಧಿಕ ಪ್ರಮಾಣದ ರಾಸಾಯನಿಕ ಗೊಬ್ಬರ ಹಾಗೂ ಉತ್ತಮ ಗುಣಮಟ್ಟದ ಬೀಜಗಳಿಗೆ ಹೆಚ್ಚಿನ ಬೇಡಿಕೆಯನ್ನು ಕಲ್ಪಿಸಿ ಕೊಡುತ್ತದೆ. ರಾಸಾಯನಿಕ ಗೊಬ್ಬರ ಹಾಗೂ ಉತ್ತಮ

ಗುಣಮಟ್ಟದ ಬೀಜಗಳನ್ನು ಕೊಳ್ಳಲು ರೈತರಿಗೆ ನ್ಯಾಯ ಬಡ್ಡಿದರದ ಪತ್ತಿನ ವ್ಯವಸ್ಥೆಯನ್ನು ಸರಕಾರ ಒದಗಿಸಿ ಕೊಡಬೇಕಾಗುತ್ತದೆ. "ಯೋಜನೆ"ಯು ನೀರಾವರಿ ಸೌಲಭ್ಯ ವನ್ನೊದಗಿಸಿ ಸಹಕಾರಿ ಪತ್ತಿನ ಸಂಘಗಳ ಬೆಳವಣಿಗೆಗಾಗಿ ಒಂದು ಆದರ್ಶ ವಾತಾವರಣವನ್ನು ನಿರ್ಮಿಸಿದೆ.

ನಾಲ್ಕನೆಯ ಪಂಚವಾರ್ಷಿಕ ಯೋಜನೆಯು ಮುಕ್ತಾ ಯದ ಹೊತ್ತಿಗೆ, ನೀರಾವರಿ ತಾಲೂಕುಗಳಾದ ರಾಯ ಚೂರು, ಮಾನ್ವಿ, ಸಿಂಧನೂರು, ಕೊಪ್ಪಳ ಹಾಗೂ ಗಂಗಾ ವತಿಗಳಲ್ಲಿ "ಪ್ರಾಥಮಿಕ ಸಹಕಾರಿ ಸಂಘ"ಗಳ ಮುಖಾಂತರ ಬೃಹತ್‌ಪ್ರಮಾಣದಲ್ಲಿ ಅಲ್ಪಾವಧಿ ಹಾಗೂ ದೀರ್ಘಾವಧಿ ಸಾಲಗಳನ್ನು ನೀಡಲಾಗಿದೆ. ಅಂಕಿ ಸಂಖ್ಯೆಗಳ ಮೊರೆಹೋದು ದಾದರೆ, ನಾಲ್ಕನೆಯ ಪಂಚವಾರ್ಷಿಕ ಯೋಜನೆಯು ಮುಕ್ತಾಯದ ಹೊತ್ತಿಗೆ ಸಹಕಾರಿ ಪತ್ತಿನ ಸಂಘಗಳು ರೂ. ೩೨೫ ಲಕ್ಷ ಅಲ್ಪಾವಧಿ ಸಾಲ, ರೂ ೭೫ ಲಕ್ಷ ಮಧ್ಯ ಮಾವಧಿ ಸಾಲ ಹಾಗೂ ರೂ. ೭೨೬ ಲಕ್ಷ ದೀರ್ಘಾವಧಿ ಸಾಲವನ್ನು ನೀಡಿದ್ದವೆಂದು ಹೇಳಬಹುದು. ಒಕ್ಕಲುತನ ಮರು-ಹಣ ನೀಡುವ (Agricultural Refinance Corporation) ಸಂಸ್ಥೆಯು "ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕಿ"ನ ಮುಖಾಂತರ ಆಯುಕಟ್ಟಿನ ೨೩.೬೦೦ ಹೆಕ್ಟೇರು ಭೂಮಿಯ ಅಭಿವೃದ್ಧಿಗಾಗಿ ರೂ. ೩೩೨ ಲಕ್ಷ ಸಾಲವನ್ನು ಸಹ ಕೊಡಮಾಡಿರುತ್ತದೆ. ಇತ್ತೀಚಗೆ ರಾಷ್ಟ್ರೀಕೃತ ಬ್ಯಾಂಕು ಗಳು ಜಿಲ್ಲೆಯ ಕೃಷಿಕರಿಗೆ ದೊಡ್ಡ ಪ್ರಮಾಣದಲ್ಲಿ ಸಾಲ ಸೌಲಭ್ಯವನ್ನು ಒದಗಿಸುತ್ತವೆ. ಅಲ್ಲದೆ ತುಂಗಭದ್ರಾ ಬ್ಯಾಂಕೆ

ನ್ನುವ ಪ್ರಾದೇಶಿಕ ಗ್ರಾಮೀಣ ಬ್ಯಾಂಕಿ (Rural Bank)ನ ಶಾಖೆಗಳು ಜಿಲ್ಲೆಯಲ್ಲಿ ಸ್ಥಾಪಿತವಾಗಿವೆ. ಈ ಎಲ್ಲಾ ಪತ್ತಿನ ಸಂಸ್ಥೆಗಳು ಪೂರಕ ಪೋಷಕವಾಗಿ ಕಾರ್ಯಮಾಡುವುದು ಮಹತ್ವದ್ದಾಗಿದೆ.

(vi) ಮಾರುಕಟ್ಟೆಯ ವ್ಯವಸ್ಥೆ (Marketing System) : ಸಹಕಾರಿ ಪತ್ತಿನ ಸಂಸ್ಥೆಗಳಿಗೆ ನಿರ್ಮಿಸಿ ಕೊಟ್ಟಂತೆ "ಸಹಕಾರಿ ಮಾರುಕಟ್ಟೆ ಸಂಘ" ಗಳಿಗೂ 'ಯೋಜನೆ' ಒಂದು ಹಿತಕರ ವಾತಾವರಣವನ್ನು ನಿರ್ಮಿಸಿದೆ. ಒಕ್ಕಲುತನದ ಉತ್ಪಾದನೆಯಂತೆ ಅದರ ಮಾರಾಟವು ಪ್ರಮುಖವಾಗಿದೆ. "ಮಾರಾಟ"ವಿಲ್ಲದೆ "ಉತ್ಪಾದನೆಗೆ" ಯಾವ ಅರ್ಥವೂ ಇಲ್ಲ ಎಂದರೆ ತಪ್ಪಾಗಲಾರದು. ಆದುದರಿಂದ ಇಂದು ರಾಯಚೂರು, ಗಂಗಾವತಿ ಹಾಗೂ ಕೊಪ್ಪಳಗಳಲ್ಲಿ ನಿಯಂತ್ರಿತ ಮಾರುಕಟ್ಟೆಗಳು ಅಸ್ತಿತ್ವದಲ್ಲಿರುತ್ತವೆ. ಇವುಗಳಲ್ಲದೆ, ಜಿಲ್ಲೆಯ ಐದು ತಾಲೂಕುಗಳಲ್ಲಿ ತಾಲೂಕ ಮಟ್ಟದ ಮಾರುಕಟ್ಟೆಯ ಸಂಸ್ಥೆಗಳಿರುತ್ತವೆ. ಈ ಐದು ತಾಲೂಕುಗಳಲ್ಲಿನ ೧೧೦ 'ಸಹಕಾರಿ ಸಂಘ'ಗಳನ್ನು ಉಪ-ಮಾರುಕಟ್ಟೆಗಳೆಂದು ಪರಿಗಣಿಸಲಾಗಿದೆ.

ಸಿಂಧನೂರು ಹಾಗೂ ಮಾನ್ವಿ ತಾಲೂಕುಗಳಲ್ಲಿ ನಿಯಂತ್ರಿತ ಮಾರುಕಟ್ಟೆಗಳನ್ನು ಮತ್ತು ಒಳಭಾಗದಲ್ಲಿ ಚಿಕ್ಕ ಮಾರುಕಟ್ಟೆಗಳನ್ನು ಸ್ಥಾಪಿಸುವ ಅವಶ್ಯಕತೆ ಸಹ ಇದೆ. ಈ ದಿಶೆಯಲ್ಲಿ ಈಗಾಗಲೆ ಕಾರ್ಯಾರಂಭ ವಾಗಿದೆ.

ಮಾರುಕಟ್ಟೆಗಳ ಸ್ಥಾಪನೆ ಹಾಗು ಅವುಗಳ ಅಭಿವೃದ್ಧಿ ಸರಕಾರದ ಹೊರತು ಇನ್ನಾರು ಮಾಡುವುದು ಕಠಿಣ,

ಯಾಕೆಂದರೆ, ಅವುಗಳ ಆದಾಯ ಯಾವೊಬ್ಬ ವ್ಯಕ್ತಿಗೂ ಸೇರಿದುದಲ್ಲ, ಮತ್ತು ಲಾಭವು ಬಹು ಕಾಲದ ನಂತರ ಉಂಟಾಗುವಂತಹುದಾಗಿದೆ. ಆದುದರಿಂದ, ಮಾರುಕಟ್ಟೆಗಳ ಸ್ಥಾಪನೆ ಹಾಗು ಬೆಳವಣಿಗೆ ಸರಕಾರವೇ ಕೈಕೊಳ್ಳ ಬೇಕಾದ ಕಾರ್ಯವಾಗಿದೆ. ಸರಕಾರ ಈ ವಿಷಯವನ್ನು ಅರಿತು ಈ ದಿಶೆಯಲ್ಲಿ ಭಾರದಿಂದ ಕಾರ್ಯಾರಂಭಿಸಿದೆ.

ಸಂದರ್ಭಕ್ಕನುಸಾರವಾಗಿ, ಇಲ್ಲಿ ನಾವು “ರಾಯಚೂರಿನ ನಿಯಂತ್ರಿತ ಮಾರುಕಟ್ಟೆ ಸಮಿತಿ” ಯನ್ನು ಸ್ಮರಿಸಬಹುದು. ಜಿಲ್ಲೆಯ ಮಾರುಕಟ್ಟೆಯ ವ್ಯವಸ್ಥೆಯಲ್ಲಿ ಈ ‘ಸಮಿತಿ’ ಅತಿ ಮಹತ್ವದ ಪಾತ್ರ ವಹಿಸುತ್ತಿದೆ. ಅದು ಜಿಲ್ಲೆಯ ಹೆಮ್ಮೆಯ ಆಸ್ತಿಗಳಲ್ಲಿ ಒಂದಾಗಿದೆ. ದೇಶದ ಈ ಹಲವಾರು ಯಶಸ್ವಿ ಕ್ರಮಬದ್ಧ ಮಾರುಕಟ್ಟೆಗಳಲ್ಲಿ ಒಂದಾದ ಈ ಮಾರುಕಟ್ಟೆ ೧೯೩೪ ರಲ್ಲಿ ಸ್ಥಾಪಿತವಾಯಿತು. “ಕರ್ನಾಟಕ ಒಕ್ಕಲುತನ ಹುಟ್ಟುವಳಿಗಳ ಮಾರಾಟದ (ನಿಯಂತ್ರಿತ) ಕಾಯ್ದೆ ೧೯೬೬, ಜಾರಿಯಲ್ಲಿ ಬಂದ ನಂತರ ೧೬೦ ಹಳ್ಳಿಗಳು ಸೇರಿದಂತೆ ಸಂಪೂರ್ಣ ರಾಯಚೂರು ತಾಲೂಕು ಈ ಮಾರುಕಟ್ಟೆಯ ಪರಿಧಿಗೆ ಒಳಪಟ್ಟಿತು.

ಮಾರುಕಟ್ಟೆಯ ಇನ್ನೊಂದು ಹೆಸರು “ರಾಜೇಂದ್ರ ಗಂಜ” ಆಗಿದೆ. ಅದು ವಿಶಾಲವಾದ ಪ್ರತ್ಯೇಕ “ಮಾರ್ಕೆಟ ಯಾರ್ಡ” ಯನ್ನು ಹೊಂದಿದೆ. ಮಾರುಕಟ್ಟೆ, ಸುವ್ಯವಸ್ಥಿತ ಹಾಗು ಒಂದೇ ರೀತಿ ಇರುವ ೧೨೦ ಅಂಗಡಿಗಳನ್ನು ಹೊಂದಿದೆ. ಹತ್ತಿ, ಸೇಂಗಾ, ಹೆಸರು, ಎಳ್ಳು ಹಾಗು ಉಳ್ಳಾ ಗಡ್ಡೆ ಮುಂತಾದವುಗಳು ಮುಖ್ಯವಾಗಿ ಮಾರುಕಟ್ಟೆಗೆ

ಮಾರಾಟಕ್ಕಾಗಿ ಬರುವ ಕೃಷಿ ವಸ್ತುಗಳಾಗಿವೆ. ಹತ್ತಿಯ ಮಾರಾಟದಲ್ಲಿಯೇ ಈ ಮಾರುಕಟ್ಟೆ ಕರ್ನಾಟಕ ರಾಜ್ಯದಲ್ಲಿ ಪ್ರಥಮ ಸ್ಥಾನ ಪಡೆದಿದ್ದು ಇಡೀ ಹಿಂದುಸ್ಥಾನದಲ್ಲಿ ತ್ರಿತೀಯ ಸ್ಥಾನವನ್ನು ಪಡೆದಿದೆ.

ಈ ಮಾರುಕಟ್ಟೆಯ ವಾರ್ಷಿಕ ವ್ಯಾಪಾರ ಇತ್ತೀಚಿನ ವರ್ಷಗಳಲ್ಲಿ ಗಮನಾರ್ಹವಾಗಿ ಹೆಚ್ಚಾಗಿದೆ. ಆಯಕಟ್ಟಿನ ಪ್ರದೇಶದಲ್ಲಿನ ಅಧಿಕ ಪ್ರಮಾಣದ ಕೃಷಿ ಉತ್ಪಾದನೆಯೇ ಇದಕ್ಕೆ ಮೂಲ ಕಾರಣವಾಗಿದೆ. ಇತ್ತೀಚಿನ ವರ್ಷಗಳಲ್ಲಿ ಮಾರಾಟಕ್ಕಾಗಿ ಈ ಮಾರುಕಟ್ಟೆಗೆ ಬರುತ್ತಿರುವ, ಸೇಂಗಾ, ಹತ್ತಿ, ಭತ್ತ ಮುಂತಾದ ವಸ್ತುಗಳು ಕಣ್ಣುಕುಕ್ಕಿಸುವ ಪ್ರಮಾಣದಲ್ಲಿವೆ. ಉದಾಹರಣೆಗಾಗಿ, ಈ ಮಾರುಕಟ್ಟೆಯ ವಾರ್ಷಿಕ ವ್ಯವಹಾರ ೧೯೬೫-೬೬ರಲ್ಲಿ ೧೦,೧೭,೦೪ ೦೮೬/- ರೂ.ಗಳಷ್ಟಿತ್ತು. ಹಾಗು ಈ ಪ್ರಮಾಣ ೧೯೭೪-೭೫ ರ ಹೊತ್ತಿಗೆ ರೂ. ೩೦,೮೧.೭೪೨.೬೬ ಗಳಿಗೆ ಏರಿತ್ತು. "ಯೋಜನೆ"ಯಿಂದ ಜಿಲ್ಲೆಯಲ್ಲಿ ಉಂಟಾದ ಆರ್ಥಿಕ ಪ್ರಗತಿಯನ್ನು ಸೂಚಿಸುವಲ್ಲಿ ಈ ಅಂಕಿ-ಸಂಖ್ಯೆಗಳು ತುಂಬಾ ಮಹತ್ವದ್ದಾಗಿವೆಯಲ್ಲವೆ ?

ಈ ರೀತಿಯಾಗಿ, "ಯೋಜನೆ" ಜಿಲ್ಲೆಯ ಆರ್ಥಿಕ ವ್ಯವಸ್ಥೆಯ ಪ್ರಥಮ ರಂಗವಾದ ಕೃಷಿ ವಿಭಾಗವನ್ನು ಹಲವಾರು ವಿಧಗಳಿಂದ ಅಭಿವೃದ್ಧಿಗೊಳಿಸುತ್ತಿದೆ. ಆ ಕ್ಷೇತ್ರದ ಸರ್ವಾಂಗೀಣ ಉನ್ನತಿಗಾಗಿ ಅದರ ಸಹಾಯಕ ಘಟಕಗಳನ್ನು ಸಹ ಬೆಳೆಸುತ್ತಿದೆ.

## ೭. ತುಂಗಭದ್ರಾ ಯೋಜನೆ ಹಾಗು ಔದ್ಯಮಿಕ ಅಭಿವೃದ್ಧಿ

## ( Tungabadhra Project & Industrial Development )

ಈ ಜಿಲ್ಲೆಯು ಉದ್ದಿಮೆಗಳಿಗೆ ಎರಡು ಸಾವಿರ ವರ್ಷಗಳ ಭವ್ಯ ಪರಂಪರೆ ಇದೆ. ರಾಜ್ಯಕ್ಕೆ ಚಿನ್ನದ ಬೀಡೆಂದು ಹೆಸರು ಬರುವುದಕ್ಕೆ ಜಿಲ್ಲೆಯಲ್ಲಿನ ಬಂಗಾರದ ಗಣಿಯೇ ಕಾರಣ ವಾಗಿದೆ. ಹಿಂದಿನ ಭವ್ಯ ಪರಂಪರೆಯನ್ನು ಮುಂದು ವರೆಸಿಕೊಂಡು ಬರುವಲ್ಲಿ ಹಾಗು ಉದ್ಯಮ ರಂಗದ ಪ್ರಮಾಣವನ್ನು ಪರಿಣಾಮಕಾರಿಯಾಗಿ ಹೆಚ್ಚಿಸುವಲ್ಲಿ "ಯೋಜನೆ" ಒಂದು ಮಹತ್ವದ ಪಾತ್ರ ವಹಿಸುತ್ತಿದೆ. ಆಯುಕಟ್ಟಿನ ಪ್ರದೇಶದಲ್ಲಿ ಭತ್ತ. ಸೇಂಗಾ, ಕಬ್ಬು ಮತ್ತು ಹತ್ತಿ ಇವುಗಳಿಗಾಗಿ ಸಾಕಷ್ಟು ಭೂಮಿ ನೀರಾವರಿಗೆ ಒಳ ಪಟ್ಟಿರುವುದರಿಂದ ಅವುಗಳ ಉತ್ಪಾದನೆಯು ಪ್ರಮಾಣ ಪರಿಣಾಮಕಾರಿಯಾಗಿ ಹೆಚ್ಚಿದೆ ಈ ಬೆಳೆಗಳು ದಿನಂಪ್ರತಿ ಉಪಯೋಗಿಸುವ ಒಳ್ಳೆಣ್ಣೆಯನ್ನು ಉತ್ಪಾದಿಸುವ ಮಿಲ್ಲು, ಸಕ್ಕರೆಯ ಕಾರಖಾನೆ, ಅಕ್ಕಿ ಹಾಗೂ ಅರಳೆ ಗಿರಣಿ ಮುಂತಾ ದವುಗಳಿಗೆ ಕಚ್ಚಾವಸ್ತುಗಳನ್ನು ಪೂರೈಸಿ ಆರ್ಥಿಕ ವ್ಯವ-ಸ್ಥೆಯ ಎರಡನೆಯ ರಂಗವಾದ "ಉದ್ದಿಮೆ" ರಂಗವನ್ನು ಅಭಿವೃದ್ಧಿಪಡಿಸುತ್ತಿವೆ. ಪರಿಸ್ಫುರವಾಗಿ ಹೇಳುವುದಾದರೆ "ಯೋಜನೆ" ಒಕ್ಕಲುತನದ-ಮೂಲದ-ಉದ್ದಿಮೆ (Agro-

based Industries)ಗಳಿಗೆ ವರಪ್ರಧಾನವಾಗಿ ಪರಿಣಮಿಸಿದೆ. ಈ ಕೆಳಗಿನ ಕೋಷ್ಟಕವು "ಯೋಜನೆ" ಒಕ್ಕಲುತನ-ಮೂಲದ ಉದ್ದಿಮೆಗಳನ್ನು ಅಭಿವೃದ್ಧಿ ಗೊಳಿಸಿದುದರ ವಿವರಣೆಯನ್ನು ನೀಡುತ್ತದೆ. ೧೯೬೬-೬೭ ರಿಂದ ಉಂಟಾದ ಕೃಷಿ ಮೂಲದ ಉದ್ದಿಮೆಗಳ ಪ್ರಗತಿಯನ್ನು ಸಹ ಇದರಿಂದ ಕಂಡುಕೊಳ್ಳಬಹುದು.

**ಕೋಷ್ಟಕ : ೪**

**ಕೃಷಿ ಮೂಲಕ ಉದ್ದಿಮೆಗಳ ಪ್ರಗತಿ**

| ಮಿಲ್ಲುಗಳ ಸಂಖ್ಯೆ | ೧೯೬೬-೬೭ | ೧೯೭೩-೭೪ |
|---|---|---|
| ಅಕ್ಕಿ ಗಿರಣಿಗಳು | ೨೦ | ೩೮ |
| ಎಣ್ಣೆ ಕಾರಖಾನೆಗಳು | ೩೭ | ೫೦ |
| ಹತ್ತಿ ಗಿರಣಿಗಳು | ೧೫೯ | ೧೬೫ |
| ಒಟ್ಟು | ೨೧೬ | ೨೫೩ |

Source : Asst. Director of Commerce & Industries

ಉದ್ದಿಮೆಗಳ ಸಂಖ್ಯೆಯಲ್ಲಿ ಪರಿಣಾಮಕಾರಿಯಾದ ಹೆಚ್ಚಳ ಕಂಡುಬರಲಿಲ್ಲದಿದ್ದರೂ ಅವುಗಳ ಗಾತ್ರ, ಪ್ರಮಾಣ ಹಾಗು ಮೌಲ್ಯಗಳಲ್ಲಿ ಸಾಕಷ್ಟು ಪ್ರಗತಿ ಉಂಟಾಗಿದೆಂಬುದು ಕೂಲಂಕುಷವಾದ ಅಭ್ಯಾಸದಿಂದ ಕಂಡುಬರುತ್ತದೆ.

ಇಂದು ಸ್ವತಃ ಮಾರುಕಟ್ಟೆ ಸಂಸ್ಥೆಗಳೇ ತಮ್ಮ ಅಕ್ಕಿ ಗಿರಣಿಗಳನ್ನು ಸ್ಥಾಪಿಸಿವೆ. ರಾಯಚೂರು ಹಾಗು ಗಂಗಾ

ವತಿಯ ಸಂಸ್ಥೆಗಳು ತಮ್ಮ ಅಕ್ಕಿ ಗಿರಣಿಗಳನ್ನು ಈಗಾಗಲೇ ಪ್ರಾರಂಭಿಸಿವೆ. ಇನ್ನಿತರ ತಾಲೂಕುಗಳಲ್ಲಿ ಅವುಗಳ ಸ್ಥಾಪನೆಯ ಕಾರ್ಯ ಭರದಿಂದ ಸಾಗಿದೆ.

ಆಯುಕಟ್ಟಿನ ಪ್ರದೇಶದಲ್ಲಿ ಕಬ್ಬಿನ ಬೆಳೆಯನ್ನು ದೊಡ್ಡ ಪ್ರಮಾಣದಲ್ಲಿ ಬೆಳೆಯಲಾಗುತ್ತಿದೆ. ಈ ಕಚ್ಚಾ ವಸ್ತು ಜಿಲ್ಲೆಯಲ್ಲಿನ ಸಕ್ಕರೆ ಉದ್ದಿಮೆಗಲ್ಲದೆ ಬಳ್ಳಾರಿ ಜಿಲ್ಲೆಯಲ್ಲಿರುವ "ಕೊಠಾರಿ" ಸಕ್ಕರೆ ಕಾರಖಾನೆಗೂ ನೆರವಾಗುತ್ತಿದೆ. ಇತ್ತೀಚೆಗೆ ಗಂಗಾವತಿಯಿಂದ ೧೩ ಕಿ.ಮಿ. ದೂರವಿರುವ "ಮರಳಿ" ಎಂಬ ಪ್ರದೇಶದಲ್ಲಿ ೬ ಕೋಟಿ ಬಂಡವಲಿನ ಒಂದು ಸಂಯುಕ್ತ ರಂಗದ ಸಕ್ಕರೆ ಕಾರಖಾನೆಯನ್ನು ಸ್ಥಾಪಿಸಲಾಗಿದೆ. ಈ ಕಾರಖಾನೆಯ ಅಭಿವೃದ್ಧಿಗಾಗಿ ಪೂರಕವಾಗಿ ಕಬ್ಬಿನ ಬೆಳೆಯ ಭೂ ವೈಶಾಲ್ಯ ಬೇಕಾಗಿದೆ.

ಕಬ್ಬಿನ ಬೆಳೆ "ಕಬ್ಬಿನ ಸಿಪ್ಪೆ"ಯನ್ನು ವಿಪುಲವಾಗಿ ನೀಡಿದೆ. ಈ ಕಚ್ಚಾ ವಸ್ತು ಜಿಲ್ಲೆಯಲ್ಲಿ ಕಾಗದದ ಕಾರಖಾನೆಯ ಸ್ಥಾಪನೆಗೆ ಪ್ರಶಸ್ತ ವಾತಾವರಣವನ್ನು ನಿರ್ಮಿಸಿದೆ. ಸಾಹಸಿ ಉದ್ದಿಮೆದಾರ ಈ ಸದಾವಕಾಶವನ್ನು ಉಪಯೋಗಿಸಿ ಲಾಭ ಪಡೆಯಬೇಕಾಗಿದೆ.

ಆಯುಕಟ್ಟಿನ ಪ್ರದೇಶದ ಸಿಂಧನೂರು ಹಾಗು ಮಾನ್ವಿ ತಾಲೂಕುಗಳ ನಡುವೆ ಒಂದು "ವನಸ್ಪತಿ" ತೈಲವನ್ನು ತಯಾರಿಸುವ ಕಾರಖಾನೆಯನ್ನು ಸ್ಥಾಪಿಸಲು ಕಚ್ಚಾ ವಸ್ತುಗಳ ಲಭ್ಯತೆ, ವಿಪುಲವಾದ ಕಾರ್ಮಿಕ ಶಕ್ತಿ, ಅನುಗುಣವಾಗಿರುವ ಸಾರಿಗೆ ಸೌಲಭ್ಯ ಮುಂತಾದವುಗಳು ಅಸ್ತಿತ್ವದಲ್ಲಿವೆ.

ಈ ಕಾರಖಾನೆಯ ಸ್ಥಾಪನೆ ಹಾಗು ಅಭಿವೃದ್ಧಿ ಜಿಲ್ಲೆಯ ಔದ್ಯಮೀಕರಣದ ವಿಕೇಂದ್ರೀಕರಣಕ್ಕೂ ನೆರವಾಗುತ್ತದೆ.

ಈ ಜಿಲ್ಲೆಯ ಔದ್ಯಮಿಕ ಭವಿಷ್ಯ ಬಹು ಉಜ್ವಲವಾಗಿದೆ. ಉದಾಹರಣೆಗಾಗಿ, "ಯೋಜನೆ" ಉದ್ದಿಮೆಗಳ ಬೆಳವಣಿಗೆಗೆ ಬೇಕಾದ ನೀರು, ವಿದ್ಯುತ್‌ಶಕ್ತಿ, ಕಚ್ಚಾ ವಸ್ತು ಹಾಗೂ ಇನ್ನಿತರ ಸಂಪನ್ಮೂಲಗಳನ್ನು ಒದಗಿಸಿ ಅವುಗಳ ಅಭಿವೃದ್ಧಿಗೆ ಒಂದು ಆದರ್ಶ ವಾತಾವರಣವನ್ನು ಕಲ್ಪಿಸಿ ಕೊಟ್ಟಿದೆ. ಇಲ್ಲಿನ ಬೃಹತ್ ಪ್ರಮಾಣದ ಹತ್ತಿಯ ಬೆಳವಣಿಗೆ ಹಲವಾರು "ಹತ್ತಿ ಬೀಜದ ಎಣ್ಣೆ"ಯ ಹಾಗು "ಅನುಪಯೋಗ ಹತ್ತಿಯ ಉದ್ದಿಮೆ" (Cotton Seed Extraction Oil) (Waste Cotton Industry) ಗಳಿಗೆ ಬೆಳವಣಿಗೆಗೆ ಅವಕಾಶ ನೀಡುತ್ತದೆ. ಇಲ್ಲಿನ ಅಧಿಕ ಪ್ರಮಾಣದ ಭತ್ತದ ಬೆಳೆಯು "ಕವಳೆ ಹೊಟ್ಟಿನ ಎಣ್ಣೆ" (Rice Bran Oil)ಯ ಉದ್ದಿಮೆಯ ಅಭಿವೃದ್ಧಿಗೆ ಸದಾವಕಾಶ ನೀಡುತ್ತದೆ. ಹೀಗಾಗಿ, ಮುಂಬರುವ ವರ್ಷಗಳಲ್ಲಿ "ಯೋಜನೆ" ಜಿಲ್ಲೆಯ ಔದ್ಯಮಿಕ ನಕಾಶೆಯನ್ನೇ ಬದಲಾಯಿಸುವುದರಲ್ಲಿ ಸಂದೇಹವಿಲ್ಲ.

ಹತ್ತಿ ಗಿರಣಿಗಳಿಗೆಲ್ಲಾ ಒಂದು ದೊಡ್ಡ ಆಸರೆಯನ್ನು ಕಲ್ಪಿಸಲು ಒಂದು ಹತ್ತಿ ಬಟ್ಟೆಯ ಕಾರಖಾನೆಯನ್ನು ಪ್ರಾರಂಭಿಸಬೇಕೆಂದು ಜಿಲ್ಲೆಯ "ಅಬಿವೃದ್ಧಿ ಯೋಜನೆ" (Development Plan of Raichur District) ಯಲ್ಲಿ ಸೂಚಿಸಲಾಗಿದೆ. ಇಂಥ ಕಾರಖಾನೆ ಜಿಲ್ಲೆಯ ಔದ್ಯಮಿಕ ಇತಿಹಾಸದಲ್ಲಿ ಒಂದು ಮೈಲುಗಲ್ಲಾಗಬಹುದೆಂದು ಭಾವಿಸಲಾಗಿದೆ.

## ೮. ತುಂಗಭದ್ರಾ ಯೋಜನೆ ಹಾಗೂ ತೃತೀಯ ರಂಗದ ಪ್ರಗತಿ

(T.B. Project & Tertiary Sector Development)

"ಯೋಜನೆ" ಕೃಷಿ ಹಾಗೂ ಉದ್ದಿಮೆಗಳ ಅಭಿವೃದ್ಧಿಯಲ್ಲದೆ ಜಿಲ್ಲೆಯ ಆರ್ಥಿಕ ವ್ಯವಸ್ಥೆಯ ತೃತೀಯ ರಂಗವಾದ ಸಾರಿಗೆ ಸಂಪರ್ಕ ಹಾಗೂ ಬ್ಯಾಂಕುಗಳ ಬೆಳವಣಿಗೆಯನ್ನು ಸಹ ಸಾಧಿಸಿದೆ.

೧. **ಸಾರಿಗೆ ಹಾಗೂ ಸಂಪರ್ಕ ವ್ಯವಸ್ಥೆಯ ಅಭಿವೃದ್ಧಿ** : ಬಹುಕಾಲದಿಂದಲೂ ಜಿಲ್ಲೆ ಅಸಮರ್ಪಕ ರಸ್ತೆ ಹಾಗೂ ಸಂಪರ್ಕ ಸಾಧನೆಯ ವ್ಯವಸ್ಥೆಯಿಂದ ತೊಳಲಾಡುತ್ತಿರುವುದು ಜಗಜ್ಜಾಹೀರ ಸಂಗತಿಯಾಗಿದೆ. "ಯೋಜನೆ"ಯ ಅನುಷ್ಠಾನದಿಂದಾಗಿ ಈ ಕ್ಷೇತ್ರದಲ್ಲಿ ದಿನೇದಿನೇ ಪ್ರಗತಿಯಾಗುತ್ತಿದೆ. ಇಂದಿಗೂ ಜಿಲ್ಲೆಯ ಎಲ್ಲೆಡೆಯಲ್ಲಿಯೂ ಸಮರ್ಪಕ ರಸ್ತೆ ಹಾಗೂ ಸಂಪರ್ಕಸಾಧನ ವ್ಯವಸ್ಥೆ ಕಂಡು ಬರದಿದ್ದರೂ, ಅಯಕಟ್ಟಿನ ಪರಿಸ್ಥಿತಿ ಸಾಕಷ್ಟು ಸುಧಾರಿಸಿದೆ.

ನೀರಾವರಿ ಕ್ಷೇತ್ರ ಅಭಿವೃದ್ಧಿ ಹೊಂದಿದಂತೆಲ್ಲಾ ಭೂಮಿಗೆ ಹಾಕುವ ಗೊಬ್ಬರ ಹಾಗೂ ಬೀಜ ಉಪಯೋಗಿಸುವ ಉಪಕರಣ ಮತ್ತು ಕ್ರಿಮಿನಾಶಕ ಔಷಧ ಮುಂತಾದವುಗಳನ್ನು

ಆಯುಕಟ್ಟಿನ ಪ್ರದೇಶಕ್ಕೆ ಒಯ್ಯುವುದಕ್ಕೂ ಹಾಗೂ ಅವು
ಗಳ ಉಪಯೋಗದಿಂದ ಉಂಟಾದ ಬೃಹತ್ ಪ್ರಮಾಣದ
ಉತ್ಪಾದನೆಯನ್ನು ಆಯುಕಟ್ಟಿನ ಪ್ರದೇಶದಿಂದ ಸಮೀಪ
ವಿರುವ ಜಿಲ್ಲೆಯ ವಿವಿಧ ಮಾರುಕಟ್ಟೆಗಳಿಗೆ ತರುವುದಕ್ಕೂ
ಒಂದು ಸಮರ್ಪಕ ರಸ್ತೆ ಹಾಗೂ ಸಂಪರ್ಕಸಾಧನೆ ಅತ್ಯಾ
ವಶ್ಯಕವಾಗಿರುತ್ತದೆ. ಎರಡನೆಯದಾಗಿ ರೈತನನ್ನು ಹಳ್ಳಿಯ
ದಲ್ಲಾಳಿಗಳ ಶೋಷಣೆಯಿಂದ ತಪ್ಪಿಸಲು ಸಹ ರಸ್ತೆಗಳ
ಅಭಿವೃದ್ಧಿ ಅನಿವಾರ್ಯವಾಗಿರುತ್ತದೆ. ಆತ ತಾನು ಕಷ್ಟ
ಪಟ್ಟು ಬೆಳೆಸಿದ ಬೆಳೆಗಳಿಂದ ಅತ್ಯುತ್ತಮ ಫಲ ಉಣ್ಣ
ಬೇಕಾದರೆ ಸಮರ್ಪಕ ರಸ್ತೆ ಹಾಗೂ ಸಂಪರ್ಕಸಾಧನದ
ಅಸ್ತಿತ್ವ ಅತಿ ಮುಖ್ಯವಾಗಿದೆ.

ಕೃಷಿಕ್ಷೇತ್ರದ ಸರ್ವಾಂಗೀಣ ಪ್ರಗತಿಯನ್ನು ಗಮನ
ದಲ್ಲಿಟ್ಟುಕೊಂಡು ಅಧಿಕ ಸಂಖ್ಯೆಯ ಮಾರುಕಟ್ಟೆಗಳಿಗೆ
ಸಂಪರ್ಕ ಸಾಧನಗಳನ್ನು ಒದಗಿಸಬಲ್ಲ ರಸ್ತೆ ಹಾಗೂ ಇನ್ನಿ
ತರ ಸೂಕ್ತ ಸಂಪರ್ಕ ಸಾಧನಗಳನ್ನು ನೀಡುವ ಒಂದು
ರೂ. ೪೦೫ ಲಕ್ಷದ ಬೃಹತ್ ಯೋಜನೆಯನ್ನು ೧೯೬೭-
೬೮ ರಲ್ಲಿ ರೂಪಿಸಲಾಯಿತು. ಆಯುಕಟ್ಟಿನ ಪ್ರದೇಶದ
ಆದ್ಯಂತ ಒಳ್ಳೆ ಗುಣಮಟ್ಟದ ರಸ್ತೆಗಳನ್ನು ನಿರ್ಮಿಸುವುದೇ
ಯೋಜನೆಯ ಮುಖ್ಯ ಗುರಿಯಾಗಿದೆ. ಅದು ಪೂರ್ತಿ
ಗೊಂಡಾಗ ಆಯುಕಟ್ಟು ಪ್ರದೇಶ ೧೦೩೪ ಕಿ. ಮೀ. ರಸ್ತೆ
ಯನ್ನು ಹೊಂದಲಿದೆ. ಈ ವಿಷಯ ಏನೇ ಇರಲಿ, ಈ ಕೆಳ
ಕಿನ ಕೋಷ್ಟಕವು "ರಸ್ತೆ-ಯೋಜನೆ"ಯ ಬಗೆಗೆ ಹೆಚ್ಚಿನ
ಮಾಹಿತಿಯನ್ನು ನೀಡುತ್ತದೆ. ಹತ್ತು ವರ್ಷಗಳಲ್ಲಿ ಇದನ್ನು

ಸಾಕಾರಗೊಳಿಸಲು ಸರಕಾರ ನಿರ್ಧರಿಸಿದೆ. ೧೯೭೩ರ ಮಾರ್ಚ ತಿಂಗಳ ಕೊನೆಯ ವರೆಗೆ "ರಸ್ತೆ-ಯೋಜನೆ"ಯ ಅಂಗವಾಗಿ ಜಿಲ್ಲೆಯಲ್ಲಿ ರೂ. ೮,೩೦,೪೬೬ ಹಣವನ್ನು ಖರ್ಚು ಮಾಡಿ ೧೩೦ ಕಿ. ಮೀ. ರಸ್ತೆಯನ್ನು ನಿರ್ಮಿಸಲಾಗಿದೆ.

### ಕೋಷ್ಟಕ ೫
### ಆಯಕಟ್ಟಿನ ರಸ್ತೆ ಅಭಿವೃದ್ಧಿ ಯೋಜನೆ
### (Road Development Plan of the T.B P. Area)

| ತಾಲೂಕುಗಳು | ರಸ್ತೆಗಳ ಸಂಖ್ಯೆಗಳು | ರಸ್ತೆಗಳ ಉದ್ದ ಕಿ.ಮೀ.ಗಳಲ್ಲಿ | ಅಂದಾಜ ಮಾಡಲಾದ ವೆಚ್ಚ ರೂ.ಗಳಲ್ಲಿ |
|---|---|---|---|
| ೧. ಕೊಪ್ಪಳ | ೧೦ | ೩೬.೧೬ | ೩,೯೮,೩೧೪ |
| ೨ ಗಂಗಾವತಿ | ೪೪ | ೧೯೫ ೩೬ | ೬೩,೯೪,೩೨೪ |
| ೩. ಸಿಂಧನೂರು | ೩೫ | ೨೮೦.೪೮ | ೧.೨೨.೪೮,೯೭೫ |
| ೪. ಮಾನ್ವಿ | ೪೬ | ೩೨೧ ೧೨ | ೧,೨೮,೮೮,೨೬೦ |
| ೫. ರಾಯಚೂರು | ೩೪ | ೧೮೪.೦೦ | ೭೮,೫೨,೮೧೧ |
| ೬. ದೇವದುರ್ಗ (ಸಾರಲಾಗಿಲ್ಲ) | | ೧೬.೦೦ | ೭,೩೭,೫೦೦ |
| ಒಟ್ಟು | ೧೬೯ | ೧೦೩೩.೧೨ | ೪,೦೫,೦೫,೧೮೪ |

Source : District Gazetteer.

ಒಟ್ಟಿನಲ್ಲಿ ತುಂಗಭದ್ರೆಯ ಎಡದಂಡೆ ಪ್ರದೇಶವು ಹೈದರಾಬಾದ ಮುಂಬಯಿಗಳ ಗ್ರಾಹಕ ಮಾರುಕಟ್ಟೆ ಹಾಗೂ ಬಲದಂಡೆ ಕಾಲುವೆ ಪ್ರದೇಶವು ಬೆಂಗಳೂರು ಮದ್ರಾಸ ಮಾರುಕಟ್ಟೆಗಳಿಗೆ ತುಂಬಾ ಅನುಕೂಲವಾಗಿರುತ್ತವೆ. "ರಸ್ತೆ-ಯೋಜನೆ" ಸಂಪೂರ್ಣವಾದಾಗ ಆಯಕಟ್ಟಿನ ಪ್ರದೇಶದ

ಆಮುದು-ರಫ್ತು ವ್ಯಾಪಾರ ಬಲಗೊಳ್ಳುವುದರಲ್ಲಿ ಎಳ್ಳಷ್ಟು ಸಂದೇಹವಿಲ್ಲ. ಇಂಥ ಅನುಕೂಲ ಪರಿಸ್ಥಿತಿಯೇ "ಒಂದು ಮಹಾಚಾಲಕ ಶಕ್ತಿ" ಎಂದು ಹೇಳಿದರೆ ಅತಿಶಯೋಕ್ತಿ ಯಾಗಲಾರದು.

## ೨. ಬ್ಯಾಂಕುಗಳ ಬೆಳವಣಿಗೆ

## (Development of Banking Institutions)

"ಯೋಜನೆ"ಯು ಕೃಷಿ ಕ್ಷೇತ್ರದ ಉತ್ಪಾದನೆಯ ಪ್ರಮಾಣವನ್ನು ಹೆಚ್ಚಿಸಿ, ರೈತರ ತಲಾ ಆದಾಯದ ಮೊತ್ತವನ್ನು ವೃದ್ಧಿಸಿದೆ. ಆದರ ಪರಿಣಾಮವಾಗಿ, ಅವರ ಉಳಿತಾಯದ ಸಾಮರ್ಥ್ಯವು ಸಹ ಹೆಚ್ಚಾಗಿದೆ. ಉದಾಹರಣೆಗೆ—ಸ್ಟೇಟ ಬ್ಯಾಂಕ ಆಫ್ ಹೈದ್ರಾಬಾದಿನ ಸಮೀಕ್ಷೆಯೊಂದರ ಪ್ರಕಾರ ಕೃಷಿ ಕ್ಷೇತ್ರದ ಹೆಚ್ಚಿನ ಉಳಿತಾಯದ ಆದಾಯ ರೂ. ೭೯೧.೯೪ ಲಕ್ಷಗಳಾಗಿದೆ. ಈ ಉಳಿತಾಯ ಸಾಮರ್ಥ್ಯದಲ್ಲಿನ ಹೆಚ್ಚಳ ಬ್ಯಾಂಕುಗಳ ಬೆಳವಣಿಗೆಗೆ ತಕ್ಕುದಾದ ಪರಿಸರವನ್ನು ಕಲ್ಪಿಸಿಕೊಟ್ಟಿದೆ. ಬ್ಯಾಂಕುಗಳು ಈ ಉಳಿತಾಯವನ್ನು ತಮ್ಮ ಠೇವಣಿಗೆ ಮಾರ್ಪಡಿಸಕೊಳ್ಳ ಬಹುದು.

ನೀರಾವರಿಯ ಲಭ್ಯತೆ ದ್ವಿ ಹಾಗೂ ಬಹು ಬೆಳೆಗೆ ಅನುವು ನೀಡುತ್ತದೆ. ಅದು ಉತ್ತಮ ದರ್ಜೆಯ ಹಾಗೂ ಹೆಚ್ಚು ಇಳುವರಿ ನೀಡುವ ಬೀಜ ಹಾಗೂ ರಾಸಾಯ-ನಿಕ ಗೊಬ್ಬರ ಮುಂತಾದವುಗಳಿಗೆ ಬೇಡಿಕೆಯನ್ನು ಹೆಚ್ಚಿಸಿದೆ. ಅವುಗಳನ್ನು ಕೊಳ್ಳಲು ರೈತರಿಗೆ ನ್ಯಾಯ ಬಡ್ಡಿದರದ ಪತ್ತಿನ ವ್ಯವಸ್ಥೆಯನ್ನು ಸರಕಾರ ಒದಗಿಸಿಕೊಡಬೇಕಾಗುತ್ತದೆ.

ಇನ್ನೊಂದು ಬಗೆಯಲ್ಲಿ ಹೇಳುವದಾದರೆ, ಉತ್ತಮ ಗುಣ ಮಟ್ಟದ ಬೀಜ ಹಾಗೂ ರಾಸಾಯನಿಕ ಗೊಬ್ಬರದ ಬೇಡಿಕೆ ಬ್ಯಾಂಕುಗಳ ಸ್ಥಾಪನೆ ಹಾಗೂ ಬೆಳವಣಿಗೆಯನ್ನು ನೇರವಾಗಿ ಪ್ರೋತ್ಸಾಹಿಸುತ್ತದೆ.

ವಿಷಯವೇನೇ ಇರಲಿ. ೧೯೬೦ ರ ದಶಕದ ಬ್ಯಾಂಕುಗಳ ಬೆಳವಣಿಗೆಯೊಂದಿಗೆ ಇತ್ತೀಚಿನ ಬೆಳವಣಿಗೆಯನ್ನು ಹೋಲಿಸಿ ನೋಡುವದಾದರೆ ಇಂದಿನ ಪರಿಸ್ಥಿತಿ ಗಮನಾರ್ಹವಾದ ಬದಲಾವಣೆಯನ್ನು ಕಂಡಿದೆ. ಆದರೂ ಇಂದು ಜಿಲ್ಲೆಯಲ್ಲಿ ಪ್ರತಿ ೨೮೦೦೦ ಜನಸಂಖ್ಯೆಗ ಒಂದು ಬ್ಯಾಂಕು ಇದೆ; ಹಾಗೂ ಭವಿಷ್ಯದಲ್ಲಿ ಪ್ರತಿ ೧೮೦೦೦ ಜನಸಂಖ್ಯೆಗೆ ಒಂದು ಬ್ಯಾಂಕು ಲಭ್ಯವಾಗಿರಬೇಕಾಗಿದೆ. ಕರ್ನಾಟಕ ರಾಜ್ಯದಲ್ಲಿನ ಬ್ಯಾಂಕುಗಳ ಬೆಳವಣಿಗ ಪ್ರತಿ ೧೮೦೦೦ ಜನಸಂಖ್ಯೆಗೆ ಒಂದಾಗಿರುತ್ತದೆ. ಸ್ಟೇಟ ಬ್ಯಾಂಕ ಆಫ್ ಹೈದ್ರಾಬಾದಿನ ಸಮೀಕ್ಷೆಯು ಪ್ರಕಾರ ಜಿಲ್ಲೆಯ ಒಟ್ಟು ಪತ್ತಿನ ಬೇಡಿಕೆ ರೂ. ೬೮ ಕೋಟಿಯಾಗಿರುತ್ತದೆ ಜಿಲ್ಲೆಯ ವಾಣಿಜ್ಯ ಬ್ಯಾಂಕುಗಳ ಜೊತೆ 'ಗ್ರಾಮೀಣ ಬ್ಯಾಂಕು'ಗಳು ಕೂಡಿ ಪತ್ತಿನ ಬೇಡಿಕೆಯನ್ನು ಪೂರೈಸಲು ಅವಿರತ ಶ್ರಮಪಡುತ್ತಿವೆ. ತಮ್ಮ ಕಾರ್ಯಗಳಲ್ಲಿ ಅವುಗಳು ಸಮನ್ವಯತೆಯನ್ನು ಸಾಧಿಸಿವೆ.

**೩. ತುಂಗಭದ್ರಾ ಯೋಜನೆ ಹಾಗೂ ವಿದ್ಯುತ್‌ಶಕ್ತಿ ಉತ್ಪಾದನೆ** (Power Production & Tungabhadra Project) : ತುಂಗಭದ್ರಾ ಯೋಜನೆ ಕೇವಲ ಒಂದು ಬೃಹತ್‌ಯೋಜನೆಯಷ್ಟಲ್ಲದೆ, ವಿದ್ಯುತ್‌ಶಕ್ತಿಯನ್ನು ಉತ್ಪಾದಿಸುವ ಯೋಜನೆಯೂ ಹೌದು. ಆದುದರಿಂದಲೇ

ಇದಕ್ಕೆ "ವಿವಿಧ ಉದ್ದೇಶದ ಯೋಜನೆ" ಎಂದು ಸಹ ಕರೆಯಲಾಗಿದೆ ಹೀಗಾಗಿ "ಯೋಜನೆ" ತನ್ನ ನೀರಾವರಿಯಿಂದಲ್ಲದೆ ವಿದ್ಯುತ್‌ಶಕ್ತಿ ಉತ್ಪಾದನೆಯಿಂದಲೂ ಬೇಸಾಯ, ಉದ್ದಿಮೆ ಹಾಗೂ ಸಾರಿಗೆ ಸಂಪರ್ಕ ರಂಗಗಳ ಅಭಿವೃದ್ಧಿಯನ್ನು ಸಾಧಿಸುತ್ತಿದೆ.

ನೀರಾವರಿಯೇ "ಯೋಜನೆ"ಯ ಮುಖ್ಯ ಗುರಿಯಾಗಿದ್ದಿತಾದರೂ, ಅದರಿಂದ ವಿದ್ಯುತ್‌ಶಕ್ತಿ ಉತ್ಪಾದನೆಯ ಕಾರ್ಯವು ನಡೆಯುತ್ತಿದೆ. ವಿಶೇಷವಾಗಿ ಈ ಜಿಲ್ಲೆಗೆ ನೀರೊದಗಿಸುವ ಎಡದಂಡೆ ಕಾಲುವೆಯ ಮೊದಲನೆಯ ೨೭ ಕಿ. ಮೀ. ಕಾಲುವೆಯನ್ನು ವಿದ್ಯುತ್‌ಶಕ್ತಿ ಉತ್ಪಾದನೆಯ ದೃಷ್ಟಿಯಿಂದ ನಿರ್ಮಿಸಲಾಗಿದೆ. ಈ ಕಾಲುವೆಯು ಸರಾಸರಿ ೩,೧೦೦ ಕ್ಯೂಸೆಕ್ಸ ಸಾಮರ್ಥ್ಯವನ್ನು ಹೊಂದಿದರೂ, ಮೊದಲನೆಯ ೨೭ ಕಿ. ಮೀ. ಕಾಲುವೆಯ ಸಾಮರ್ಥ್ಯ ೭,೦೦೦ ಕ್ಯೂಸೆಕ್ಸ ಇರುತ್ತದೆ. ೧೮ ಕಿ. ಮೀ.ನಲ್ಲಿ ಒಂದು ಜಲಪಾತವಿದೆ. ಅದು "ಶಿವಪುರ" ಜಲಪಾತವೆಂದು ಪ್ರಸಿದ್ಧಿಯಾಗಿದೆ. ಇವೆಲ್ಲವುಗಳು ವಿದ್ಯುತ್‌ಶಕ್ತಿಯ ಉತ್ಪಾದನೆಗೆ ಪ್ರಶಸ್ತವಾಗಿವೆ. ಪರಿಣಾಮವಾಗಿ "ಯೋಜನೆ"ಯ ವಿದ್ಯುದಾಗರದಲ್ಲಿ ಒಟ್ಟು ೧,೭೨,೫೦೦ ಕಿ ವ್ಯಾ. ವಿದ್ಯುತ್‌ಶಕ್ತಿ ಉತ್ಪಾದನೆಯಾಗುತ್ತಿದೆ.

"ಯೋಜನೆ" ಇಲ್ಲಿಯ ವರೆಗೆ (ಅಂದರೆ '೭೩–೭೪) ಜಿಲ್ಲೆಯ ಒಟ್ಟು ೧೩೬೪ ಹಳ್ಳಿಗಳಲ್ಲಿ ೬೨೬ ಹಳ್ಳಿಗಳಿಗೆ ವಿದ್ಯುತ್ ಸರಬರಾಜು ಮಾಡಿದೆ. ಕೆಳಗಿನ ಕೋಷ್ಟಕವು ಈ

ದಿಶೆಯಲ್ಲಿ ಕೈಕೊಂಡ ಕಾರ್ಯಕ್ರಮದ ಮಾಹಿತಿಯನ್ನು ನೀಡುತ್ತದೆ. ಆಯಕಟ್ಟಿನ ಪರಿಧಿಯಲ್ಲಿ ಬರುವ ತಾಲೂಕುಗಳು ಉಳಿದವುಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ವಿದ್ಯುತ್ ಶಕ್ತಿಯ ಪೂರೈಕೆಯನ್ನು ಹೊಂದುತ್ತವೆಂಬುದನ್ನು ಸಹ ಇದು ನಿರೂಪಿಸುತ್ತದೆ

## ಗ್ರಾಮೀಣ ವಿದ್ಯುದೀಕರಣ ಯೋಜನೆ
## (Rural Electrification Programme)
### ಕೋಷ್ಟಕ ೬

| ತಾಲೂಕಿನ ಹೆಸರು | ತಾಲೂಕಿನ ಒಟ್ಟು ಹಳ್ಳಿಗಳ ಸಂಖ್ಯೆ | ವಿದ್ಯುತ್ ಹೊಂದಿದ ಹಳ್ಳಿಗಳ ಸಂಖ್ಯೆ | ವಿದ್ಯುತ್ ಹೊಂದಿದ ಹಳ್ಳಿಗಳ ಶೇಕಡವಾರು |
|---|---|---|---|
| ೧. ರಾಯಚೂರು | ೧೫೩ | ೯೫ | ೬೨ % |
| ೨. ದೇವದುರ್ಗ | ೧೬೭ | ೫೭ | ೩೪ " |
| ೩. ಸಿಂಧನೂರು | ೧೨೭ | ೪೭ | ೩೭ " |
| ೪. ಮಾನ್ವಿ | ೧೫೭ | ೬೪ | ೪೦ " |
| ೫. ಅಂಗಸೂಗೂರ | ೧೩೯ | ೯೮ | ೫೪ " |
| ೬. ಕೊಪ್ಪಳ | ೧೩೮ | ೧೦೪ | ೭೫ " |
| . ಕುಷ್ಟಗಿ | ೧೬೪ | ೪೮ | ೨೯ " |
| ೮. ಗಂಗಾವತಿ | ೧೩೬ | ೫೨ | ೩೮ " |
| ೯. ಯಲಬುರ್ಗಾ | ೧೩೯ | ೫೧ | ೩೮ " |
| ಒಟ್ಟು | ೧೩೧೯ | ೬೭೬ | ೪೭ % |

Source : K. E. B. RAICHOR

"ಯೋಜನೆ" ಹಳ್ಳಿಗಳಿಗೆ ವಿದ್ಯುತ್‌ಶಕ್ತಿಯನ್ನು ಪೂರೈಸಿ ಕೃಷಿ ಕ್ಷೇತ್ರದ ಚಟುವಟಿಕೆಗಳನ್ನು ಗಮನಾರ್ಹವಾಗಿ ಹೆಚ್ಚಿಸಿರುತ್ತದೆ. "ಯೋಜನೆ", ಪಂಪಸೆಟ್ಟುಗಳಿಗೆ ವಿದ್ಯುತ್‌ಶಕ್ತಿಯನ್ನು ಒದಗಿಸಿ ರೈತರಿಗೆ ವೈಜ್ಞಾನಿಕ ಉಪಕರಣಗಳನ್ನು ಒಕ್ಕಲುತನ ಕ್ಷೇತ್ರದಲ್ಲಿ ಉಪಯೋಗಿಸುವಂತೆ ಪ್ರೇರೇಪಿಸಿದೆ. ಹಿಂದಿನ ಎತ್ತಿನ ಗಾಡಿಯು ಕೃಷಿ ಕ್ಷೇತ್ರ ಇಂದು ಸಾಕಷ್ಟು ಪ್ರಗತಿಯನ್ನು ಕಂಡಿದೆ. ಒಟ್ಟಿನಲ್ಲಿ. "ಯೋಜನೆ" ಬೇಸಾಯದ "ವೈಜ್ಞಾನಿಕತೆ" ಯ ಪ್ರಮಾಣವನ್ನು ವೃದ್ಧಿಸಲು ಹಲವಾರು ವಿಧಗಳಿಂದ ಪ್ರಯತ್ನಿಸುತ್ತಿದೆ ಎಂದು ನಿಸ್ಸಂದೇಹವಾಗಿ ಹೇಳಬಹುದು. ಅವುಗಳಲ್ಲಿನ ಔದ್ಯಮಿಕ ಬೆಳವಣಿಗೆಗೂ ನಾಂದಿ ಹಾಡಿರುತ್ತದೆ.

ಒಟ್ಟಿನಲ್ಲಿ "ಯೋಜನೆ" ಯ ಆಶ್ರಯದಲ್ಲಿ ಜಿಲ್ಲೆಯ ಕೃಷಿ ಉದ್ದಿಮೆ ಹಾಗು ಸಾರಿಗೆ ಸಂಪರ್ಕ ಕ್ಷೇತ್ರಗಳ ಸರ್ವತೋಮುಖ ಬೆಳವಣಿಗೆಯನ್ನು ಸಾಧಿಸಲು ಅನವರತ ಪ್ರಯತ್ನ ನಡೆಸಿದೆ. ಈ ಜಿಲ್ಲೆಯು ರಾಜ್ಯದ ಆಹಾರ ಕಣಜವಾಗಬೇಕಾಗಿದೆ. ಈ ಭವ್ಯ ಹಿನ್ನೆಲೆಯಲ್ಲಿ "ಯೋಜನೆ" ಯಿಂದ ಉಂಟಾದ ಪ್ರಗತಿ ತನ್ನದೆ ಆದ ವೈಶಿಷ್ಟ್ಯತೆಯನ್ನು ಹೊಂದಿದೆ.

## ೯. "ಯೋಜನೆ" ತಂದ ಸಮಸ್ಯೆಗಳು

## (Problems of the Project)

"ಯೋಜನೆ" ಒಂದು ದೋಷರಹಿತವರವಾಗಿಲ್ಲ; ತನ್ನ ಸಮೃದ್ಧಿಯ ಜೊತೆಗೆ ಹಲವಾರು ಸಮಸ್ಯೆಗಳನ್ನು ಸಹ

ಜಿಲ್ಲೆಯ ಜನತೆಗೆ ತಂದೊಡ್ಡಿದೆ. ಅವುಗಳನ್ನು ಕೂಲಂಕುಷವಾಗಿ ಚರ್ಚಿಸಿ, ಅವುಗಳ ನೈಜತೆಯನ್ನು ಕಂಡುಕೊಳ್ಳುವುದು ಉಚಿತವಾಗಿದೆ. ಆದುದರಿಂದ, "ಯೋಜನೆ"ಯ ಕೆಲವು ಪ್ರಮುಖ ಸಮಸ್ಯೆಗಳನ್ನು ಈ ಕೆಳಗೆ ಚರ್ಚಿಸಲಾಗಿದೆ.

೧. **"ಯೋಜನೆ"ಯ ನೀರುಣಿಸುವ ಸಾಮರ್ಥ್ಯದ ಬಗೆಗಿನ ಸಂಶಯ :** "ಯೋಜನೆ"ಯ ಕಾರಣಕರ್ತರು ಅದು ಪರಿಪೂರ್ಣಗೊಂಡಾಗ ೩,೩೯,೨೨೨.೬೨ ಹೆಕ್ಟೇರು ಭೂಮಿಗೆ ನೀರುಣಿಸುವುದೆಂದು ಲೆಕ್ಕ ಹಾಕಿದ್ದರು. ಆದರೆ, ಇದುವರೆಗೆ ೧,೨೦,೦೦೦ ಹೆಕ್ಟೇರು ಭೂಮಿಗೆ ಮಾತ್ರ ನೀರೊದಗಿಸಲಾಗಿದೆ. ಇನ್ನುಳಿದ ೨.೧೨,೦೦೦ ಹೆಕ್ಟೇರು ಜಮೀನಿಗೆ ನೀರುಣಿಸುವುದು ಸಾಧ್ಯವಾಗುತ್ತಿಲ್ಲ. ಈಗಾಗಲೇ ನಮಗೆ ನೀರೆ ಬರುವುದಿಲ್ಲವೆಂದು ಕೆಲವು ತಾಲೂಕಿನ ಹಲವಾರು ಕಾಲುವೆಯ ಕಟ್ಟಕಡೆಯ (Tail ended) ರೈತರು ದೂರುತ್ತಿದ್ದಾರೆ. ಇದು ಸಾಲದೇನೆಂಬಂತೆ "ಎಡದಂಡೆ ಕಾಲುವೆ" ಪದೇ ಪದೇ ಒಡೆದು ಹೋಗುತ್ತಿದೆ. ವಾಸ್ತವದಲ್ಲಿ "ಎಡದಂಡೆ ಕಾಲುವೆ" ೪೧೦೦ ಕ್ಯೂಸೆಕ್ಸ ಪ್ರಮಾಣದ ನೀರನ್ನು ಸರಬರಾಜು ಮಾಡುವ ಸಾಮರ್ಥ್ಯವನ್ನು ಹೊಂದಿದೆ. ಒಂದು ಕ್ಯೂಸೆಕ್ಸ ಪ್ರಮಾಣದ ನೀರಾವರಿ (Heavy Irrigation) ಹಾಗು ಕಡಿಮೆ ಪ್ರಮಾಣದ ನೀರಾವರಿ (Light-Irrigation) ಬೆಳೆಗಳೆರಡನ್ನು ಬೆಳೆಯುವ ೩೯ ಹೆಕ್ಟೇರು ಭೂಮಿಗೆ ಸಾಕಾಗುತ್ತದೆಂಬ ತಜ್ಞರ ಲೆಕ್ಕಾಚಾರಕ್ಕನುಗುಣ

ವಾಗಿ "ಯೊಜನೆ" ೧,೧೭,೦೦೦ ಹೆಕ್ಟೇರು ಭೂಮಿಗೆ ಮಾತ್ರ ನೀರುಣಿಸಬಲ್ಲುದಾಗಿರುತ್ತದೆ. ಈ ವಾಸ್ತವ ಅಂಕಿಸಂಖ್ಯೆಗಳು "ಯೊಜನೆ" ಯ ನಿರ್ಮಾತೃಗಳ ಮೂಲ ಲೆಕ್ಕಾಚಾರಕ್ಕೆ ಸರಿ ಹೊಂದುತ್ತಿರುವುದಿಲ್ಲ. ಈ ಸಂಗತಿಯನ್ನು ಬಲ್ಲ ಕೆಲವರು ಆ ನಿರ್ಮಾತೃಗಳ ಲೆಕ್ಕಾಚಾರವೇ ಸರಿಯಿಲ್ಲವೆಂದು ವಾದಿಸು ತ್ತಿದ್ದಾರೆ. ವಿಷಯ ಏನೇ ಇರಲಿ, ಒಂದು ಬೃಹತ್ ಹಾಗು ವಿವಿಧ ಉದ್ದೇಶಗಳ ನೀರಾವರಿ ಯೋಜನೆಯ ಲೆಕ್ಕಾಚಾರ ಈ ರೀತಿ ತಪ್ಪಬಹುದೇ ಎಂಬ ಸಂಶಯ ನಮ್ಮಲ್ಲಿ ಬರದೆ ಇರಲಾರದು.

೨. **ಭೂಮಿಯನ್ನು ನೀರಾವರಿಗೆ ಒಳಪಡಿಸುವ ವಿಧಾನ ವೈಜ್ಞಾನಿಕವಾಗಿಲ್ಲ (Localization pattern is not scientific) :** "ಯೋಜನೆ" ಯ "ಭೂಮಿಗೆ ನೀರುಣಿಸುವ ವಿಧಾನ" (Localization Pattern) ಅಷ್ಟೇನು ವೈಜ್ಞಾನಿಕ ವಾಗಿಲ್ಲ. ಮೇಲಿಂದ ಮೇಲೆ ಮೊಗವೆತ್ತಿ ನಿಲ್ಲುವ ಬರಗಾಲ ಪರಿಸ್ಥಿತಿಯ ಭೀಕರ ಹಿನ್ನೆಲೆಯಲ್ಲಿ ರೂಪಗೊಂಡ ಯೋಜನೆ ಯಿದು. ಬರಗಾಲದ ದಿನಗಳಲ್ಲಿ ಇಲ್ಲಿನ ಜನಜೀವನಕ್ಕೆ ಸಂರಕ್ಷಣೆ ನೀಡುವುದೇ ಈ ಯೋಜನೆಯ ಉದ್ದೇಶ. ಆದು ದರಿಂದ ಶೇಕಡಾ ೮೦ ಕ್ಕೂ ಹೆಚ್ಚು ಭಾಗದ ಭೂಮಿಯನ್ನು ಕಡಿಮೆ ಪ್ರಮಾಣದ ನೀರಾವರಿಗಾಗಿ (Light Irrigation) ಸಿದ್ಧಗೊಳಿಸಲಾಗಿದ್ದು, ಇನ್ನುಳಿದ ಶೇಕಡಾ ೨೦ ರಷ್ಟು ಮಾತ್ರ ಅಧಿಕ ಪ್ರಮಾಣದ ನಿರಾವರಿಗಾಗಿ ಅಣಿಗೊಳಿಸಿಕೊಳ್ಳ ಲಾಗಿದೆ. ಇಂಥಹ "ಭೂಮಿಗೆ ನೀರುಣಿಸುವ ವಿಧಾನ" ಅಷ್ಟೇನು ವೈಜ್ಞಾನಿಕವಾಗಿರದೆ ಇರುವುದು ಸಹಜ.

ಅಸ್ತಿತ್ವದ "ಭೂಮಿಗೆ ನೀರುಣಿಸುವ ವಿಧಾನ" ಎರಡು ಅಧಿಕ ಪ್ರಮಾಣದ ನೀರಾವರಿ ಹೊಂದಿರುವ ಭೂ ತುಂಡುಗಳ ನಡುವೆ ಒಂದು ಕಡಿಮೆ ಪ್ರಮಾಣದ ನೀರಾವರಿಯ ಭೂ ಹಿಡುವಳಿ ಬರುವಂತೆ ಮಾಡಿ ರೈತರಿಗೆ "ಬೆಳೆ ವಿಧಾನ" (Cropping Pattern)ವನ್ನು ಉಲ್ಲಂಘಿಸುವಂತೆ ಪ್ರೇರೇಪಿಸಿದೆ.

ಮೇಲಾಗಿ, ಈ ಅವೈಜ್ಞಾನಿಕ ಭೂಮಿಗೆ ನೀರುಣಿಸುವ ಪದ್ಧತಿ"ಯಿಂದ ಎಷ್ಟು ಅನಾನುಕೂಲವಾಗುತ್ತಿದೆ ಎಂಬುದನ್ನು ಅರಿಯುವ ಸುಶಿಕ್ಷಿತ ರೈತರು ಸಹ ಜಿಲ್ಲೆಯಲ್ಲಿ ಬಹಳಷ್ಟಿಲ್ಲ. ಒಟ್ಟಿನಲ್ಲಿ ಅಸ್ತಿತ್ವದಲ್ಲಿರುವ "ಭೂಮಿಗೆ ನೀರುಣಿಸುವ ಪದ್ಧತಿ"ಯಿಂದಾಗಿ "ಯೋಜನೆ"ಯ ನೀರು ಅತ್ಯುತ್ತಮವಾಗಿ ಉಪಯೋಗವಾಗುತ್ತಿಲ್ಲ. ಇದು, ಭೂ-ಉತ್ಪಾದನೆಯ ಮೇಲೂ ತನ್ನ ಅನಿಷ್ಟ ಪರಿಣಾಮವನ್ನು ಬೀರಿದೆ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ

೩. ಎಡದಂಡೆ ಕಾಲವೆಯಲ್ಲಿನ ಬಿರುಕುಗಳು: ಎಡದಂಡೆ ಕಾಲುವೆಯು ಪದೇ ಪದೇ ಒಡೆದು ಹೋಗುತ್ತಿದೆ. ಉದಾಹರಣೆಗಾಗಿ, ೧೯೬೬ ನೆಯ ವರ್ಷದ ಜನವರಿಯಿಂದ ಅದು ಆಗಾಗ್ಗೆ ತೀಕ್ಷ್ಣವಾಗಿ ಒಡೆಯುತ್ತಿರುತ್ತದೆ. ತತ್ಪರಿಣಾಮವಾಗಿ, ೧–೭–೧೯೬೬ ರಿಂದ ೧–೧–೬೮ರ ವರೆಗಿನ ಅವಧಿಯಲ್ಲಿ ಉಂಟಾದ ಬೆಳೆಗಳ ನಷ್ಟ ೨ ಕೋಟಿಯಾಗಿರುತ್ತದೆಂದು ಅಂದಾಜು ಮಾಡಲಾಗಿದೆ. ಮೊನ್ನೆ ಮೊನ್ನೆ ವರೆಗೂ ಈ ಸಮಸ್ಯೆ ೧೯೬೬ ರಲ್ಲಿದ್ದಷ್ಟೇ ತೀಕ್ಷ್ಣವಾಗಿದ್ದಿತೆಂದು ಹೇಳಿದರೆ ಅತಿಶಯೋಕ್ತಿ ಏನಾಗಲಾರದು.

ರೈತರ ಬೆಳೆಗಳಿಗೆ ಅಪಾರ ಹಾನಿ ಉಂಟು ಮಾಡಿದ ಈ ಸಮಸ್ಯೆ ಅವರಿಗೆ "ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ" ವೆಂಬಂತೆ ಮಾಡಿರುತ್ತದೆ. ಅವರ ಆರ್ಥಿಕ ಸ್ಥಿರತೆ ಹಾಗೂ ಮನ ನೆಮ್ಮದಿಗೆ ಸಹ ಕಂಟಕಪ್ರಾಯವಾಗಿದೆ.

ಈ ಹಿಂದೆ, "ಯೋಜನೆ"ಯು ಆಡಳಿತ ವರ್ಗದವರು ಎಡದಂಡೆಕಾಲುವೆಯ ಬಿರುಕುಗಳನ್ನು ನೇರವಾಗಿ ಸರಿ ಪಡಿಸುವಬದಲು, ಅದನ್ನು ಹೇಗೆ ಸದೃಢಗೊಳಿಸಬೇಕೆಂಬ ವಿಷಯದ ಮೇಲೆ ಹಲವಾರು ವಿಚಾರ ಸಂಕಿರಣ ಹಾಗೂ ಚರ್ಚಾಕೂಟಗಳನ್ನು ಮಾತ್ರ ಏರ್ಪಡಿಸಿ ವೃಥಾ ಕಾಲಹರಣ ಮಾಡಿದ್ದಾರೆ. ಇದೊಂದು ಜನರ ದುರ್ದೈವದ ಸಂಗತಿಯೇ ಸರಿ. ಈ ವಿಷಯದಲ್ಲಿ ಉದಾಸೀನವಾದುದಕ್ಕೆ ೮ ಕೋಟಿ ಹಣವನ್ನು ವೆಚ್ಚ ಮಾಡುವ ಭಾರಿ ಬೆಲೆ ತೆತ್ತಬೇಕಾಗಿದೆ.

**೪. ಲಭ್ಯವಿರುವ ನೀರಿನ ದುರುಪಯೋಗ**: 'ಯೋಜನೆ'ಯು ಲಭ್ಯವಿರುವ ನೀರು ತುಂಬಾ ದುರುಪಯೋಗವಾಗುತ್ತಿದೆ. ಮೊದಲನೆಯದಾಗಿ, ನೀರಿನ "ವೈಜ್ಞಾನಿಕ ಉಪಯೋಗ" ರೈತರಿಗೆ ಗೊತ್ತಿರುವುದಿಲ್ಲ. ಎರಡನೆಯದಾಗಿ, ಹಳ್ಳಿಯ ಆರ್ಥಿಕ, ಸಾಮಾಜಿಕ ಹಾಗೂ ಧಾರ್ಮಿಕವಾಗಿ ಬಲಿಷ್ಟವಾಗಿರುವ ವ್ಯಕ್ತಿಗಳು ಸಣ್ಣ ಪ್ರಮಾಣದ ಭೂ ಹಿಡುವಳಿರುವ ಬಡರೈತರಿಗೆ ನೀರು ದೊರಕದಂತೆ ತಡೆ ಹಿಡಿಯುತ್ತಿದ್ದಾರೆ. ಇಷ್ಟು ಸಾಲದೇನೆಂಬಂತೆ, ತಾವು ನೀರನ್ನು ಉಪಯೋಗಿಸಿಕೊಂಡ ಬಳಿಕ ಅದನ್ನು ವ್ಯರ್ಥವಾಗಿ ಹರಿಯಲು ಬಿಡುತ್ತಿರುತ್ತಾರೆ. ತತ್ಪರಿಣಾಮವಾಗಿ ರೈತರ ನಡುವೆ ಆಗಾಗ್ಗೆ ಜಗಳವಾಗಿ ನೆತ್ತರು ಸುರಿಯುತ್ತಿರು

ತ್ತದೆ. ನೀರಿಗಾಗಿ ಎಷ್ಟು ಜಗಳ, ಎಷ್ಟು ಕದನ ! ಎಂದು ಉದ್ಗಾರ ತೆಗೆಯುವಂತೆ ಪ್ರೇರೇಪಿಸಿದ್ದಾರೆ ಇಲ್ಲಿನ ಬಲಿಷ್ಠ ರೈತರು ಒಂದು ಸಣ್ಣ ರೈತ ಸಮಾಜವೋ ಅಥವಾ ಬೇರೆ ಯಾವುದಾದರೂ ವಸತಿಯೋ ಅಲ್ಲಿನ ನೀರಿನ ಸಲುವಾಗಿ ಆಗುವ ಗೊಂದಲ, ತಾಕಲಾಟ, ಪಿತೂರಿ ಸಾಮಾನ್ಯವಲ್ಲ ವೆಂಬುದು "ಪ್ರೇಮಕ್ಕಾಗಿರುವ ಕಲಹಗಳನ್ನು ಬಿಟ್ಟಮೇಲೆ ನೀರಿನ ಮೇಲಿನ ಹಕ್ಕುಗಳು ಬೇರೆ ಎಲ್ಲಾ ಕಾರಣಗಳಿ ಗಿಂತಲೂ ಮಾನವ ಜೀವಿಗಳಿಗೆ ಹೆಚ್ಚಿನ ತೊಂದರೆ ನೀಡಿವೆ" (After the passions of love, water rights have caused more trouble than anything else to human species) ಎಂಬ ಉಕ್ತಿಯಿಂದ ಸ್ಪಷ್ಟವಾಗುತ್ತದೆ.

೫. ಕೃಷ್ಯೋತ್ಪಾದನೆಗೆ ಪೂರಕವಾಗಿರುವ ಸವಲತ್ತು ಗಳ ಅಸಮರ್ಪಕ ಪೂರೈಕೆ: ಒಕ್ಕಲುತನದ ಉತ್ಪಾದನೆಯ ಹೆಚ್ಚಳಕ್ಕೆ ಅವಶ್ಯವಾಗಿರುವ ನ್ಯಾಯ ಬಡ್ಡಿದರದ ಪತ್ತು, ಗೊಬ್ಬರ, ಬೀಜ ಮಾರುಕಟ್ಟೆ ಗೋದಾಮು ಹಾಗೂ ಸಾರಿಗೆ ಸಂಪರ್ಕದ ವ್ಯವಸ್ಥೆ ಮುಂತಾದ ಸೌಕರ್ಯಗಳ ಪೂರೈಕೆ ತೃಪ್ತಿಕರವಾಗಿಲ್ಲ.

ಸಹಕಾರಿ ಪತ್ತಿನ ಸಂಸ್ಥೆಗಳು ಬಹಳಷ್ಟು ಶ್ರೀಮಂತ ರೈತರಿಗೆ ಸಾಲ ನೀಡಿರುತ್ತವೆ ಈ ಸಂಗತಿಯು ಪರಿಸ್ಥಿತಿಯ ಒಂದು ಮುಖವಾದರೆ ಅದರ ಮತ್ತೊಂದು ಮುಖ ಸಹ ಕಾರಿ ಪತ್ತಿನ ಪೂರೈಕೆ ಹಾಗೂ ಬೇಡಿಕೆಯ ನಡುವೆ ೭ ಕೋಟಿ ಮೊತ್ತದ ಅಂತರವಿದೆ ಎಂಬುದನ್ನು ಸ್ಪಷ್ಟೀಕರಿ ಸುತ್ತದೆ.

ಜಿಲ್ಲೆಯಲ್ಲಿ ರಾಸಾಯನಿಕ ಗೊಬ್ಬರದ ಪೂರೈಕೆಯೂ ಸಮಾಧಾನಕಾರಿಯಾಗಿಲ್ಲ. ಜಿಲ್ಲೆಯ ಬೇಡಿಕೆ ೨ ಲಕ್ಷಟನ್ನ ಗಳಿದ್ದರೆ, ಪೂರೈಕೆಯು ಕೇವಲ ೭೦,೦೦೦ ಟನ್‌ಗಳಾಗಿದೆ. ಇದಕ್ಕಿಂತಲೂ ದುರ್ದೈವದ ಸಂಗತಿಯೆಂದರೆ ಲಭ್ಯವಿರುವ ರಾಸಾಯನಿಕ ಗೊಬ್ಬರದ ಅತ್ಯುತ್ತಮ ಉಪಯೋಗವನ್ನು ರೈತರು ಸಾಧಿಸಿಲ್ಲ. ಆರ್ಥಿಕ ಹಾಗು ಸಾಮಾಜಿಕವಾಗಿ ಬಲಿಷ್ಟವಾಗಿರುವ ಶ್ರೀಮಂತ ರೈತರು ಸಣ್ಣ ಹಾಗೂ ಬಡ ರೈತರಿಗೆ ಗೊಬ್ಬರ ಸಿಗದಂತೆ ಮಾಡಿದ್ದಾರೆ.

ಉತ್ತಮ ಗುಣಮಟ್ಟದ ಬೀಜಗಳ ಪೂರೈಕೆ ಸಹ ಅತೃಪ್ತಿ ಕರವಾಗಿದೆ ಹೆಚ್ಚು ಇಳುವರಿ ನೀಡುವ ಬೀಜಗಳಾದ Hybrid-4 ಹಾಗೂ ವರಲಕ್ಷ್ಮಿ ಬೀಜಗಳು ಉತ್ತಮ ಮೌಲ್ಯವನ್ನು ಹೊಂದಿದ ಕಾರಣ ಕಳೆದ ೧೯೭೩ ವರ್ಷದ ಫಲ ಸರಿಯಾಗಿ ಬರಲಿಲ್ಲ. ಆದುದರಿಂದ ರೈತರು ಅಪಾರ ನಷ್ಟವನ್ನು ಅನುಭವಿಸಬೇಕಾಯಿತು.

ಉತ್ತಮ ಮಾರುಕಟ್ಟೆಯ ವ್ಯವಸ್ಥೆ ಹಾಗೂ ಧಾನ್ಯ ಸಂಗ್ರಹಣೆಯ ಗೋದಾಮುಗಳ ವ್ಯವಸ್ಥೆಗಳು ಅಷ್ಟೇನು ಸಮರ್ಪಕವಾಗಿಲ್ಲ. ಜಿಲ್ಲೆಯಲ್ಲಿ ಹಲವಾರು ಸಹಕಾರಿ ಮತ್ತು ನಿಯಂತ್ರಿತ ಮಾರುಕಟ್ಟೆ ಹಾಗೂ ಧಾನ್ಯಸಂಗ್ರಹ ಣೆಯ ಗೋದಾಮು ಮುಂತಾದವುಗಳಿದ್ದರೂ ಅವುಗಳ ಕೊರತೆ ಇಂದಿಗೂ ಇದೆ.

ಬೇಸಾಯ ಕ್ಷೇತ್ರದ ಸರ್ವತೋಮುಖ ಬೆಳವಣಿಗೆಯಲ್ಲಿ ಸಾರಿಗೆ-ಸಂಪರ್ಕಗಳ ಪಾತ್ರ ಹಿರಿದಾದುದಾಗಿದೆ. ಆದರೆ

ಆಯುಕಟ್ಟಿನ ಪ್ರದೇಶದಲ್ಲಿ ಇಂದಿಗೂ ಸಾರಿಗೆ ಸಂಪರ್ಕದ ವ್ಯವಸ್ಥೆ ಸಂಪೂರ್ಣ ಸಮಾಧಾನಕರವಾಗಿರುವುದಿಲ್ಲ. ಇತ್ತೀಚಗೆ, ಸರಕಾರ ಹಲವಾರು ಯೋಜನೆಗಳನ್ನು ಕೈಗೊಳ್ಳುತ್ತಿದ್ದರೂ, ಈ ಕ್ಷೇತ್ರದಲ್ಲಿ ಸಾಧಿಸಬೇಕಾದುದು ಇನ್ನು ಸಾಕಷ್ಟಿದೆ.

೬. **ಅಭಿವೃದ್ಧಿಗಾಗಿರುವ ಜನರ ಪ್ರತಿಕ್ರಿಯೆ :** ಈ ವಿಷಯದಲ್ಲಿ ಜಿಲ್ಲೆಯ ಜನ ಸ್ವಲ್ಪ ಸೋಮಾರಿಗಳೆಂದರೆ ತಪ್ಪಾಗಲಾರದು. ತಮ್ಮ ಆರ್ಥಿಕ ನಕಾಶೆಯನ್ನೇ ಬದಲಾಯಿಸುವ “ಯೋಜನೆ“ ಕಣ್ಮುಂದಿದ್ದರೂ ಅದರ ಉಪಯೋಗ ಮೊದಲ ಐದು ವರ್ಷ ಪಡೆಯಲಿಲ್ಲ. ೧೯೫೩ರಲ್ಲಿಯೇ ಅಣೆಕಟ್ಟಿನ ನಿರ್ಮಾಣ ಪೂರ್ತಿಯಾಗಿ ನೀರು ದೊರಕುವಂತಾದರೂ ೧೯೬೮ರ ವರೆಗೆ ಅವಶ್ಯಕವಿರುವ ಹೊಲದ ಕಾಲುವೆಯ ನಿರ್ಮಾಣ ಮುಗಿದಿರಲಿಲ್ಲ. ತತ್ಪರಿಣಾಮವಾಗಿ, ರೈತರು ನೀರಿಗಾಗಿ ೧೯೬೮ರ ವರೆಗೆ ಕಾಯಬೇಕಾಯಿತು. ಕೊನೆಗೆ ೧೯೬೮ರಲ್ಲಿ ೨೨೭ ಕಿ. ಮೀ. ಉದ್ದದ ಎಡದಂಡೆ ಕಾಲುವೆಯ ನಿರ್ಮಾಣ ಮುಕ್ತಾಯಗೊಂಡಿತು. ಬಡ ರೈತರು ಹೊಲದ ಕಾಲುವೆಯ ನಿರ್ಮಾಣವನ್ನು ಹೇಗೆ ಕೈಗೊಂಡಾರು? ಆದುದರಿಂದ ೧೯೬೮ರ ವರೆಗೆ ಅವರು ನಿರ್ವಾಹವಿಲ್ಲದೆ ಕಾಯಬೇಕಾಯಿತೆಂದು ಕೆಲವರು ವಾದಿಸಬಹುದು. ಇದು ಸ್ವಲ್ಪಮಟ್ಟಿಗೆ ನಿಜವಾದರೂ ಇಲ್ಲಿ ಕಂಡುಬರುವ ಹಣಕ್ಕಿಂತಲೂ ಪ್ರಮುಖವಾಗಿರುವ ಹಾಗೂ ಮೂಲದ ಕೊರತೆ ಎಂದರೆ "ಮನೋಸ್ಥೈರ್ಯದ ಅಭಾವ" ಇದರ ಜೊತೆಗೆ ಜನರ ಮೂಢನಂಬಿಕೆಗಳೂ ಸೇರಿ ಪರಿಸ್ಥಿತಿ

ಯನ್ನು ಬಹುಕಾಲ ಹದಗೆಡಿಸಿತ್ತು. ಈ ಭಾಗದ ರೈತರ "ನಡವಳಿಕೆ"ಯನ್ನು ಲೇಖಕಿ ಕುಸುಮ್ ನಾಯರರವರು ತಮ್ಮ "Blossoms in the Dust" ಎಂಬ ಪುಸ್ತಕದಲ್ಲಿ ಪರಿಣಾಮಕಾರಿಯಾಗಿ ವಿವರಿಸಿದ್ದಾರೆ. ಅವರು "ಯೋಜನೆ" ಆಯಕಟ್ಟಿನಲ್ಲಿ ಬರುವ "ಗಂಗಾವತಿ" (ಒಂದು ತಾಲೂಕು) ಹಾಗೂ ತಮಿಳುನಾಡಿನ "ಭವಾನಿಸಾಗರ ಯೋಜನೆ"ಯಲ್ಲಿ ಬರುವ "ಕೊಯಂಬತ್ತೂರು" (ಒಂದು ಜಿಲ್ಲೆ) ಎಂಬ ಎರಡು ಪ್ರದೇಶಗಳನ್ನು ಅಭ್ಯಸಿಸಿ; "ಗಂಗಾವತಿ"ಯ ರೈತರು ನೀರನ್ನು ಉಪಯೋಗಿಸುವಲ್ಲಿ ತುಲನಾತ್ಮಕವಾಗಿ ಹಿಂದೆ ಬಿದ್ದಿರುತ್ತಾರೆಂದು ಸಮರ್ಥಿಸಿದ್ದಾರೆ ಅವರು ಇಲ್ಲಿನ ಜನ ತಮ್ಮ ವೈಯಕ್ತಿಕ ಸಂಪತ್ತನ್ನು ಹೆಚ್ಚಿಸಿಕೊಳ್ಳಲು ನೀರನ್ನು ಉಪಯೋಗಿಸದೆ; ಮಳೆ ಬಾರದಿದ್ದಾಗ ಮಾತ್ರ ಅದನ್ನು "ರಕ್ಷಣೆ" ಎಂದು ಉಪಯೋಗಿಸುತ್ತಿದ್ದಾರೆಂಬ ನಿರ್ಣಯಕ್ಕೆ ಬಂದಿರುತ್ತಾರೆ. ಇಂದು ಪರಿಸ್ಥಿತಿ ಬಹಳಷ್ಟು ಸುಧಾರಿಸಿದ್ದರೂ "ಯೋಜನೆ"ಯ ಲಾಭ ಪಡೆಯುವಲ್ಲಿ ಜಿಲ್ಲೆಯ ಜನ ಹಿಂದೆ ಬಹಳಷ್ಟು ತಡಮಾಡಿದರೆಂಬ ಸತ್ಯವನ್ನು ಯಾರು ಅಲ್ಲಗಳೆಯುವಂತಿಲ್ಲ.

೭. ಅಣೆಕಟ್ಟಿನ ಪ್ರದೇಶದ "ವಂಡು" (Silt) ಶೇಖರಣೆ : ಪ್ರತಿವರ್ಷವೂ ಅಣೆಕಟ್ಟಿನಲ್ಲಿ ವಂಡು ಅಧಿಕ ಪ್ರಮಾಣದಲ್ಲಿ ಶೇಖರವಾಗುತ್ತಿದೆ. ತತ್ಪರಿಣಾಮವಾಗಿ ಅಣೆಕಟ್ಟಿನ ನೀರು ಶೇಖರಣೆಯ ಸಾಮರ್ಥ್ಯ ಪ್ರತಿವರ್ಷ ಕಡಿಮೆಯಾಗುತ್ತ ಹೋಗುತ್ತಿದೆ. ಇದು "ಯೋಜನೆ"ಯ ನೀರಾವರಿ ಸಾಮರ್ಥ್ಯವನ್ನು ಮೊಟಕುಮಾಡುತ್ತ ಹೋಗುತ್ತಿದೆ.

ಮೊದಲೇ "ಯೋಜನೆ"ಯು ಲೆಕ್ಕಾಚಾರ ತಪ್ಪಿರುತ್ತದೆ. ಇದು ಸಾಲದೇನೆಂಬಂತೆ ಆಣೆಕಟ್ಟಿನಲ್ಲಿ ಈ ರೀತಿ ಮಂಡು ಶೇಖರಣೆಯಾಗುತ್ತಿದೆ. ಇವೆಲ್ಲವುಗಳ ಪರಿಣಾಮ ಒಳ್ಳೆಯು ದಾಗಲಿಕ್ಕಿಲ್ಲ.

ವಿಷಯ ಏನೇ ಇರಲಿ, ಮೇಲಿನ ಸಮಸ್ಯೆಗಳು ಪರಿಹರಿಸು ವಂತಹವಾಗಿವೆ. ಈ ಕೆಳಗಿನ ಪರಿಹಾರಕ್ರಮಗಳನ್ನು ಸರ ಕಾರ ಕೈಕೊಳ್ಳಬಹುದು. ಈಗಾಗಲೇ ಸರಕಾರ ಈ ದಿಶೆಯಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಿರುತ್ತದೆ.

## ೧೦. ಪರಿಹಾರ ಕ್ರಮಗಳು

**೧. ಎಡದಂಡೆ ಕಾಲುವೆಯ ಬಿರುಕುಗಳನ್ನು ಸರಿ ಪಡಿಸುವುದು** : ಕೋಟಿಗಟ್ಟಲೆ ಹಣ ವೆಚ್ಚಮಾಡಿ ನಿರ್ಮಿ ಸಿದ "ಯೋಜನೆ"ಯ ಕಾಲುವೆಯನ್ನು ಒಡೆಯಲು ಅವ ಕಾಶ ನೀಡುವುದು ಜಾಣತನದ ಲಕ್ಷಣವಲ್ಲ. ಇದು, ಇತ್ತ ರಾಜಕೀಯ ದೃಷ್ಟಿಯಿಂದಲೂ ಸಾಧುವಲ್ಲ; ಅತ್ತ ಆರ್ಥಿಕ ವಾಗಿಯೂ ಯಾರು ಬೋಧಿಸುವಂತಿಲ್ಲ. ಇದು "ಯೋಜ ನೆ"ಯ ಗರಿಷ್ಠ ಪ್ರಮಾಣದ ಉಪಯೋಗಕ್ಕೆ ಕಂಟಕ ಪ್ರಾಯವಾಗಿರುತ್ತದೆ. ಉದಾಹರಣೆಗಾಗಿ, ಆಯಕಟ್ಟಿನ ಕ್ಷೇತ್ರದ "ಅನುಪಯೋಗ ಸಾಮರ್ಥ್ಯ" ( Excess Capacity) ಶೇಕಡಾ ೪೦ ಇರುವದೆಂದು ಅಂದಾಜು ಮಾಡ

ಲಾಗಿದೆ. ಆದುದರಿಂದ ಅದಷ್ಟು ತೀವ್ರ ಕಾಲುವೆಯನ್ನು ಸದೃಢಗೊಳಿಸಬೇಕು; ತನ್ಮೂಲಕ ಜಿಲ್ಲೆಯ ಆರ್ಥಿಕ ಪ್ರಗತಿಯನ್ನು ಕ್ಷಿಪ್ರವಾಗಿ ಸಾಧಿಸಬೇಕು,

೨. **ಬೆಳೆ ವಿಧಾನದ ಉಲ್ಲಂಘನೆ:** ಕಾಲುವೆಯ ಬಿರುಕಿನಂತೆ ಈ ಅಂಶವು ಸಹ "ಯೋಜನೆ"ಯ ಗರಿಷ್ಠ ಪ್ರಮಾಣದ ಉಪಯೋಗಕ್ಕೆ ಅಡ್ಡ ಬರುತ್ತಿದೆ. ಆದುದರಿಂದ, ಈ ಸಮಸ್ಯೆಯನ್ನು ತೀವ್ರವಾಗಿ ಪರಿಹರಿಸಬೇಕಾಗಿದೆ. "ಬೆಳೆ-ವಿಧಾನ"ವನ್ನು ಉಲ್ಲಂಘನೆ ಮಾಡುವುದರಿಂದ ತಮಗೇ ಹೆಚ್ಚಿನ ಹಾನಿ ಉಂಟಾಗುತ್ತದೆಂಬ ಅಂಶವನ್ನು ರೈತರಿಗೆ ಮನವರಿಕೆ ಮಾಡಿಕೊಡುವುದರಿಂದ ಈ ಸಮಸ್ಯೆಯನ್ನು ಶಾಶ್ವತವಾಗಿ ಸುಲಭದಲ್ಲಿ ನಿವಾರಿಸಬಹುದು. ಈ ಕಾರ್ಯ ಒಂದೆರಡು ತಿಂಗಳಲ್ಲಿ ಮುಗಿಯುವಂತಹದಲ್ಲ; ಇದಕ್ಕಾಗಿ ಸತತ ಪರಿಶ್ರಮ ಬೇಕಾಗುತ್ತದೆ. ಈ ದಿಶೆಯಲ್ಲಿ, ರೈತರ ತರಬೇತಿ ಕೇಂದ್ರಗಳು ಉಪಯುಕ್ತ ಸೇವೆಯನ್ನು ಸಲ್ಲಿಸಬಹುದಾಗಿವೆ.

೩. **ನೀರಿನ ದುರುಪಯೋಗವನ್ನು ತಡೆಯುವುದು :** ನೀರಿನ ದುರುಪಯೋಗವನ್ನು ತಡೆಯಲು ಮೊದಲನೆಯದಾಗಿ, ಸರಕಾರ ರೈತರಿಗೆ ನೀರಿನ ಅತ್ಯುತ್ತಮ ಉಪಯೋಗದ ಬಗ್ಗೆ ಮಾಹಿತಿಯನ್ನು ನೀಡಬೇಕು. ಎರಡನೆಯದಾಗಿ ಪರರಿಗೆ ಹಾನಿಯನ್ನುಂಟುಮಾಡುವ ದುರುದ್ದೇಶದಿಂದ ನೀರನ್ನು ತಡೆಹಿಡಿಯುವ ಸಮಾಜ ವಿದ್ರೋಹಿಗಳಿಗೆ ಸರಕಾರ ತಕ್ಕ ಶಾಸ್ತಿ ಮಾಡಬೇಕು ಮೂರನೆಯದಾಗಿ, ಸರಕಾರ

ಕಾಲುವೆಯು ವಿತರಣೆ ಕೇಂದ್ರ ಹಾಗೂ ಹೊಲದ ಕಾಲುವೆಗಳಿಗೆ ನೀರು ಹರಿಸುವಲ್ಲಿ ಸ್ವತಃ ತಾನೇ ಉಂಟುಮಾಡುತ್ತಿರುವ ನೀರಿನ ದುರುಪಯೋಗಕ್ಕೆ ಕ್ಷಿಪ್ರ ತಡೆಯನ್ನು ಹಾಕಬೇಕು.

೪. ಉತ್ಪಾದನೆಯ ಹೆಚ್ಚಳಕ್ಕೆ ಪೂರಕವಾಗಿರುವ ಸವಲತ್ತುಗಳ ಸಮಾಧಾನಕರ ಪೂರೈಕೆ : "ಯೋಜನೆ" ಅನುಷ್ಠಾನದಲ್ಲಿ ಬಂದಾಗಿನಿಂದ ನ್ಯಾಯ ಬದ್ಧದರದ ಪತ್ತು, ಗೊಬ್ಬರ, ಬೀಜ, ಮಾರುಕಟ್ಟೆಯ ಹಾಗೂ ಸಾರಿಗೆ ಸಂಪರ್ಕದ ವ್ಯವಸ್ಥೆ ಮುಂತಾದ ಸವಲತ್ತುಗಳಿಗೆ ಬೇಡಿಕೆ ಪರಿಣಾಮಕಾರಿಯಾಗಿ ಹೆಚ್ಚುತ್ತಿದೆ ಈ ಕಾರ್ಯಕ್ಕಾಗಿ ಅಸ್ತಿತ್ವದಲ್ಲಿರುವ ಸಹಕಾರಿ ಹಾಗೂ ಸಾರ್ವಜನಿಕ ಸಂಘಗಳನ್ನು ಸರಕಾರ ಬಲಿಷ್ಟಗೊಳಿಸಬೇಕಾಗಿದೆ.

೫. ರೈತರಲ್ಲಿ ಜಾಗೃತಿಯನ್ನು ಮೂಡಿಸಬೇಕು : ರೈತರಲ್ಲಿನ ಜಾಗೃತಿ ಇತರ ಹಲವಾರು ಸಮಸ್ಯೆಗಳನ್ನು ಪರಿಹರಿಸಲು ಸಮರ್ಥವಾಗಿರುತ್ತದೆ ಆದ್ದರಿಂದ ಈ ಕಾರ್ಯ ಆದಷ್ಟು ತೀವ್ರ ಮುಗಿಸಬೇಕು. ಆದರೆ ಅದು ಅಲ್ಪಾವಧಿಯ ಸಾಧನೆಯಾಗಿರುವುದಿಲ್ಲ. ವಿಷಯ ಏನೇ ಇರಲಿ, ಈಗ ಪರಿಸ್ಥಿತಿ ಸಾಕಷ್ಟು ಸುಧಾರಿಸಿರುತ್ತದೆ. ೧೯೫೦ ಹಾಗೂ ೧೯೬೦ ರ ದಶಕಗಳಂತೆ ರೈತರು ನೀರಿನ ಉಪಯೋಗಕ್ಕೆ ಮೂಗು ಮುರಿಯುತ್ತಿಲ್ಲ. ಆದರೂ ಅವರಿಗೆ ಸರಕಾರ ನೀರಿನ ಅತ್ಯುತ್ತಮ ಉಪಯೋಗದ ಬಗ್ಗೆ ಹೆಚ್ಚಿನ ಮಾಹಿತಿ ನೀಡುವುದು ಅವಶ್ಯಕವಾಗಿದೆ.

**೬. ಆಣೆಕಟ್ಟಿನಲ್ಲಿ ಶೇಖರವಾದ ಪಂಡನ್ನು ತೆಗೆದು ಹಾಕಬೇಕು :** ಈಗಾಗಲೇ ಸಾಕಷ್ಟು ಪ್ರಮಾಣದಲ್ಲಿ ಪಂಡು ಶೇಖರಣೆಯಾಗಿ ಅದನ್ನು ತೆಗೆದುಹಾಕುವ ಕಾರ್ಯ ಯಾವ ರೀತಿಯು ವಿಲಂಬವಿಲ್ಲದೆ ಪ್ರಾರಂಭವಾಗಬೇಕು. ಸ್ವಲ್ಪ ತಡ ವಾದಲ್ಲಿ ಈ ಸಮಸ್ಯೆ ಉಲ್ಬಣಿಸಬಹುದು. ಹಾಗೂ ಅದರ ನಿವಾರಣೆಗೆ ಅನಾವಶ್ಯಕವಾಗಿ ಹೆಚ್ಚಿನ ವೆಚ್ಚ ಸಹ ಉಂಟಾಗ ಬಹುದು.

## ೧೧. "೨೦-ಅಂಶಗಳ ಆರ್ಥಿಕ ಕಾರ್ಯಕ್ರಮ ಹಾಗೂ ಯೋಜನೆ"

ನಮ್ಮ ಮಾಜಿ ಪ್ರಧಾನಮಂತ್ರಿ ಶ್ರೀಮತಿ ಇಂದಿರಾ ಗಾಂಧಿ ಯವರ "೨೦-ಅಂಶಗಳ ಆರ್ಥಿಕ ಕಾರ್ಯಕ್ರಮ"ದ ಸುವ್ಯವ ಸ್ಥೆಯ ಅನುಷ್ಠಾನದಿಂದಾಗಿ, ಪರಿಹಾರಕ್ರಮಗಳು ಭರದಿಂದ ಸಾಗಿವೆ. ಪರಿಣಾಮವಾಗಿ, ಸಮಸ್ಯೆಗಳ ತೀಕ್ಷ್ಣತೆ ಕಡಿಮೆ ಯಾಗುತ್ತಿದೆ. ಉದಾಹರಣೆಗಾಗಿ, ಎಡದಂಡೆ ಕಾಲುವೆಯನ್ನು ಹೆಚ್ಚುಕಡಿಮೆ ಸದೃಢಗೊಳಿಸಲಾಗಿದೆ. ರೈತರಿಗೆ ನೀರಿನ ಅತ್ಯುತ್ತಮ ಉಪಯೋಗದ ಬಗ್ಗೆ ತರಬೇತಿ ನೀಡಲಾಗಿದೆ. "ರೈತ ತರಬೇತಿ ಕೇಂದ್ರ" ಗಳು "ಬೆಳೆ-ವಿಧಾನ" ಬಗ್ಗೆ ಸರಿ ಯಾದ ಜ್ಞಾನವನ್ನು ಪ್ರಸರಿಸಿವೆ. ಕೃಷಿ ಬೆಳವಣಿಗೆಗೆ ಪೂರಕವಾಗಿರುವ ಸವಲತ್ತುಗಳೆಲ್ಲವನ್ನು ರೈತರಿಗೆ ಹೆಚ್ಚು ಹೆಚ್ಚಾಗಿ ನೀಡಲಾಗಿದೆ. ಪ್ರಾತಿಕ್ಷಿಕೆ ಹೊಲಗಳ ಮೂಲಕ

ಹೈಬ್ರೀಡ ಬೀಜಗಳ ಬಿತ್ತನೆಯನ್ನು ಜನಪ್ರಿಯಗೊಳಿಸಲಾಗಿದೆ. ಇವೆಲ್ಲವುಗಳು ರೈತರಲ್ಲಿ ಜಾಗೃತಿಯನ್ನು ಮೂಡಿಸಿರುತ್ತವೆ. ಈ ದಿಶೆಯಲ್ಲಿ ಮುಂಬರುವ ಭವಿಷ್ಯ ತುಂಬಾ ಆಶಾದಾಯಕವಾಗಿದೆ.

## ೧೨. ಕೊನೆಯ ಮಾತು

ಈ ಜಿಲ್ಲೆಯ ಸರ್ವತೋಮುಖ ಬೆಳವಣಿಗೆಗೆ ಬುನಾದಿಯಾಗಿರುವ "ಯೋಜನೆ"ಯ ಪ್ರತಿಕೂಲಗಳು ಕೇವಲ ಕೆಲವು ಬೆರಳುಗಳ ಮೇಲೆ ಎಣಿಸುವಷ್ಟು ಆಗಿವೆ. ಆದುದರಿಂದ "ಯೋಜನೆ"ಯಿಂದ ಜಿಲ್ಲೆಗೆ ಅಸಂಖ್ಯಾತ ಅನುಕೂಲಗಳು ಉಂಟಾಗಿವೆ ಹಾಗು ಮುಂದೆಯೂ ಉಂಟಾಗುತ್ತವೆಂದು ನಿಸ್ಸಂಶಯವಾಗಿ ಹೇಳಬಹುದು. ಇಂಥಹ ಬೃಹತ್ ಹಾಗು ವಿವಿಧ ಉದ್ದೇಶಗಳ ಯೋಜನೆಯ ಮೂಲ ಕಾರಣಕರ್ತನಾದ 'Sir Arthur Cotton' ನಿಗೆ "ಓ ನೀರಾವರಿ ಮಾಂತ್ರಿಕನೇ ಇಗೊ ನಿನಗೆ ತಲೆಭಾಗಿಸುವೆವು" (O' irrigation Wizard -hats off to you) ಎಂದು ಹೇಳಿ ನಮ್ಮ ಗೌರವ ವಂದನೆ (tribute) ಗಳನ್ನು ಸಲ್ಲಿಸುವುದು ಉಚಿತವಲ್ಲವೆ?

## ಗ್ರಂಥಋಣ


1) "Blossoms in the Dust"—Kusum Nayyar

2) Raichur District Development plan

3) "Ededore Naadu"—Raichur District Quarterly Bulletin—Jan. 1975

4) "Tungabhadra—A citadel of Hope"

5) Raichur District Gazatteer

## ಉಪನ್ಯಾಸ ಗ್ರಂಥಮಾಲೆಯ
## ಇತ್ತೀಚಿನ ಪ್ರಕಟನೆಗಳು

**ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ**

೧ ಕಬೀರ ಹಾಗೂ ಸರ್ವಜ್ಞ —ಎನ್. ಎಸ್. ಕಾಳೆ

೨ ಕಂದಗಲ್ ಹನುಮಂತರಾಯ —ಕಣವಿ ಮಹಾದೇವ

೩ ಎರಡನೆಯ ನಾಗವರ್ಮನ ವರ್ಧಮಾನ ಪುರಾಣ —ಎಸ್. ಪಿ. ಪಾಟೀಲ

೪ ಬೆಳಕು : ವೈಜ್ಞಾನಿಕ ವಿವೇಚನೆ —ಮೋಹನ ಹಬ್ಬು

೫ ಚಿಕ್ಕ ನಂಜೇಶನ ರಾಘವಾಂಕ ಚರಿತೆ —ಮಲ್ಲಿಕಾರ್ಜುನ್ ಸಾರಾಪುರೆ

೬ ಅಪರಾಧಿಗಳು ಹಾಗೂ ಅವರ ಸುಧಾರಣೆ —ಎಸ್. ಎಫ್. ಪೂಜಾರ

೭ ಪ್ರಕೃತಿಯಲ್ಲಿ ವರ್ಣ ವಿನ್ಯಾಸ —ಎಸ್. ಬಿ. ಕಾಖಂಡಕಿ

೮ ಸೀತೆಯ ಮೂರು ಚಿತ್ರಗಳು —ಮಂದಾಕಿನಿ ತವಗ

೯ ಗ್ರಂಥಾಲಯದ ಅಂದು-ಇಂದು —ಎಸ್. ಆರ್. ಗುಂಜಾಳ

೧೦ ಮಾನವನ ಸೇವೆಯಲ್ಲಿ ಪರಮಾಣು ಶಕ್ತಿ —ಎಸ್. ಸಿ. ಗಲಗಲಿ

---

ವ್ಯಾಸಂಗ ವಿಸ್ತರಣ-ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩